


# ಸಪ್ತಗಿರಿ



ಕನ್ನಡ, ತೆಲುಗು, ತಮಿಳು, ಇಂಗ್ಲೀಷ್,
ಹಿಂದಿಗಳಲ್ಲಿ ಪ್ರಕಟವಾಗುವ ಮಾಸಪತ್ರಿಕೆ.

ಸಂಪುಟ 11] ಮೇ 1981 [ಸಂಚಿಕೆ 12

**ಬಿಡಿ ಪ್ರತಿ ೫೦ ಪೈಸೆ.**

**ಸಂವತ್ಸರ ಚಂದಾ ೬ ರೂ.**

ಗೌರವ ಸಂಪಾದಕರು ;
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್,
ಐ.ಎ.ಎಸ್.,
ಟೆಲಿಫೋನ್ ನಂಬರು: 2322

ಸಂಪಾದಕರು:
ಕೆ. ಸುಬ್ಬಾರಾವು, ಎಂ.ಎ.,
ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.
ಟೆಲಿಫೋನ್ ನಂಬರು; 2254

ಮುದ್ರಣ:
ಯಂ. ವಿಜಯಕುಮಾರ್‌ರೆಡ್ಡಿ
ಮೇನೆಜರ್, ತಿ. ತಿ. ದೇ. ಪ್ರೆಸ್, ತಿರುಪತಿ.
ಟೆಲಿಫೋನ್ ನಂಬರು; 2340

ಮಿಕ್ಕ ವಿವರಗಳಿಗೆ:
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ



## ವಿಷಯಸೂಚಿ

# ಅದ್ವೈತ ಸಿದ್ಧಾಂತ

ಶ್ರೀ ಎಚ್.ಜೆ. ರಾಮ್ಯೆಂಗಾರ್

ಮೇ ತಿಂಗಳಿನಲ್ಲಿ ಭಾರತಾದ್ಯಂತ ಶಂಕರಾಚಾರ್ಯರ ಜಯಂತ್ಯುತ್ಸವವನ್ನು ಆಚರಿಸ ಲಾಗುತ್ತದೆ. ಶಂಕರರು ಕೇರಳದ ಕಾಲಡಿಯಲ್ಲಿ ಜನಿಸಿದರೂ ಕನ್ಯಾಕುಮಾರಿಯಿಂದ ಕಾಶ್ಮೀರದ ವರೆಗೆ ಆ ಕಾಲಕ್ಕೇ ಪ್ರಸಿದ್ಧರಾದವರು. ಅವರ ಪ್ರತಿಪಾದನೆ ಅದ್ವೈತ ಅದರ ಕಿರುಪರಿ ಚಯದ ಪ್ರಯತ್ನ ಇದು.

— ಸಂ॥

ಅದ್ವೈತವೆಂದರೆ ಎರಡಲ್ಲದ್ದು ಅಥವಾ ಎರಡ ನೆಯದಿಲ್ಲದ ಒಂದೇ ವಸ್ತು. ಆ ವಸ್ತುವು ಸರ್ವ ವ್ಯಾಪಕವಾದುದರಿಂದ ಪರಮಾತ್ಮನೆಂದೂ, ಎಲ್ಲಕ್ಕೂ ದೊಡ್ಡದಾದುದರಿಂದ ಬ್ರಹ್ಮವೆಂದೂ ಕರೆಯಲ್ಪಡುತ್ತದೆ. ಸತ್ಯ, ನಿತ್ಯ, ಶುದ್ಧ, ಜ್ಞಾನ ರೂಪ, ಬಂಧರಹಿತ ಆದ ಆ ವಸ್ತುವಿನಲ್ಲಿ ಆಕಾರ ವಿಶೇಷ, ವಿಕಾರ, ಸ್ತ್ರೀಪುರುಷ ಭೇದ- ಇವು ಇಲ್ಲ. ಅದು ವಿಭಜನೆಗೆ ಸಿಕ್ಕುವಂತಹುದಲ್ಲ. ಹೀಗೆ ನಿರ್ವಿ ಶೇಷ, ನಿರಾಕಾರ, ನಿರ್ಗುಣ ಆದ ಚೈತನ್ಯನು–ಬ್ರಹ್ಮನು–ಅದ್ವೈತ ವೇದಾಂತದ ಪರಮಾತ್ಮ. ಈ ಪರಮಾರ್ಥ ಸತ್ಯವಸ್ತುವು ಅಸಂಗ, ಉದಾ ಸೀನತೆಗಳಿಂದ ಕೂಟಸ್ಥವಾಗಿದೆ. ಲೋಕದಲ್ಲಿ ವ್ಯವಹರಿಸುವ ಚೈತನ್ಯನೂ–ಜೀವನು–ಇಂತಹ ಶುದ್ಧ, ಚಿನ್ಮಾತ್ರ ಆದ ಪರಮಾತ್ಮನೇ ಆಗಿದ್ದರೂ, ತನ್ನ ನಿಜಸ್ಥಿತಿಯನ್ನು ಅರಿಯದೆ, ದೇಹವೇ ತಾನೆಂಬ ತಪ್ಪು ತಿಳುವಳಿಕೆಯಿಂದ ದೇಹದ ದುಃಖ ಗಳಿಗೆ ಸಿಲುಕಿಕೊಂಡು ನರಳುತ್ತಿದ್ದಾನೆ. ಈ ಜೀವ ವನಿಗೆ ತಾನು ಸಚ್ಚಿದಾನಂದನೆಂಬ ಅರಿವು ಉಂ ಟಾದಾಗ, ತತ್ತ್ವವು ಸಾಕ್ಷಾತ್ಕೃತವಾದಾಗ, ಜೀವ ನ್ಮುಕ್ತನಾಗಿ, ಅವನ ಭಾಗಕ್ಕೆ ದೇಹವೇ ಇಲ್ಲವಾಗಿ ದೇಹದ ದುಃಖಗಳು ಅಂಟಲಾರವು. ಹೀಗೆ ಸಚ್ಚಿ ದಾನಂದಾತ್ಮ ಸ್ವರೂಪವಾದ ಬ್ರಹ್ಮರೂಪವನ್ನು ಪಡೆಯುವುದೇ ಮುಕ್ತಿ ಎನಿಸಿಕೊಳ್ಳುತ್ತದೆ.

ಅವಿದ್ಯೆಯಿಂದ ಕೂಡಿದ ನಮಗೆ ಕಾಣುತ್ತಿರುವ ಪ್ರಪಂಚವು ಕನಸಿನಲ್ಲಿ ಗೋಚರವಾಗುವಂತೆ ಕೇವಲ ಕಾಲ್ಪನಿಕವಾದುದು, ಜೀವ. ಜಗತ್ತುಗಳು ವಾಸ್ತವವಲ್ಲ. ಈ ಮೂಲ ಕಲ್ಪನೆಯು ಬ್ರಹ್ಮ ಜ್ಞಾನದಿಂದ ನಾಶವಾಗುತ್ತದೆ. ಮಾಯೆಯಲ್ಲಿ ಪ್ರತಿಫಲಿಸಿ ಈಶ್ವರನೆನಿಸುವ ಬ್ರಹ್ಮನು, ಅವಿದ್ಯೆ ಯಲ್ಲಿ ಪ್ರತಿಬಿಂಬಿಸಿ ಜೀವನೆನಿಸುತ್ತಾನೆ. ಮಾಯಾ ಕಲ್ಪಿತ ಈಶ್ವರನು ಜಗದ್ವ್ಯಾಪಾರಗಳನ್ನು ನಿರ್ವ ಹಿಸಿದರೆ, ಅವಿದ್ಯಾಕಲ್ಪಿತ ಜೀವನು ಶರೀರೇಂದ್ರಿ ಯಗಳೊಡನೆ ವ್ಯವಹರಿಸುತ್ತಿದ್ದಾನೆ. ಇವರಿಬ್ಬರೂ ಕಾಲ್ಪನಿಕರಾದುದರಿಂದ ಇವರಿಂದ ನಡೆಯುವ ಜಗದ್ವ್ಯಾಪಾರಗಳೂ ಮಿಥ್ಯೆಯೇ ಆಗಿವೆ. ಬ್ರಹ್ಮನೇ ಆಗಿರುವ ಜೀವನು, ಅಜ್ಞಾನದಿಂದ ಆವೃತನಾಗಿ, ತನ್ನ ಸುತ್ತಮುತ್ತಲಿನ ಸನ್ನಿವೇಶ ವನ್ನು ಪ್ರಪಂಚವೆಂದು ತಪ್ಪಾಗಿ ಭಾವಿಸುತ್ತಿದ್ದಾನೆ. ಅಜ್ಞಾನವು ನಿವೃತ್ತಿಯಾದೊಡನೆ ಜಗತ್ತು, ಜೀವ, ಜಗದೀಶ್ವರ ಯಾವುದೂ ಕಾಣಿಸದೆ ವಾಸ್ತ ವವಾದ ಬ್ರಹ್ಮ ಭಾವವು ಕಾಣಿಸುತ್ತದೆ. ಉಪನಿ ಷತ್ತುಗಳ ಮತ್ತು ಬ್ರಹ್ಮ ಸೂತ್ರಗಳ ಶ್ರವಣ, ಅವುಗಳ ಮನನ ಹಾಗು ನಿದಿಧ್ಯಾಸನಗಳಿಂದ ಬ್ರಹ್ಮ ಸಾಕ್ಷಾತ್ಕಾರವಾಗುವುದರಲ್ಲಿ ಸಂದೇಹ ವಿಲ್ಲ.

ವೇದೋಪನಿಷತ್ತುಗಳು ಪ್ರ ತಿ ಪಾ ದಿ ಸು ವ ಅತಿಪ್ರಾಚೀನವಾದ ಅದ್ವೈತ ಪಂಥವನ್ನು ಸ್ಥಾಪಿಸಿದ ಶಂಕರಾಚಾರ್ಯರು (ಕ್ರಿ. ಶ. 788–820) ವೈದಿಕ ಧರ್ಮವು ಪುನರುಜ್ಜೀವಿ ಸಲು ಕಾರಣರಾದರು. ಇವರಿಗಿಂತ ಹಿಂದೆಯೇ ಗೌಡಪಾದ, ಗೋವಿಂದ ಮುಂತಾದ ಯತಿಗಳು ಇದಕ್ಕೆ ರೂಪಗೊಟ್ಟಿದ್ದರೂ, ಅವುಗಳಲ್ಲಿ ಅಲ್ಪ ಬದ ಲಾವಣೆ ಮಾಡಿ ಒಂದು ಪಂಥದ ಸ್ಥಾಪನೆಗೆ ಬೇಕಾದ ಎಲ್ಲ ವಿಷಯಗಳೂ ಸಮಗ್ರ, ಸುಸಂ ಬದ್ಧ ಆಗಿ ಕೂಡುವಂತೆ ಪ್ರಸ್ಥಾನತ್ರಯಗಳೆನಿಸಿದ ಉಪನಿಷತ್ತುಗಳು, ಬ್ರಹ್ಮಸೂತ್ರಗಳು, ಭಗವ ದ್ಗೀತೆ ಇವುಗಳ ಬಗ್ಗೆ ಶ್ರೇಷ್ಠವಾದ ವ್ಯಾಖ್ಯಾನ–ಭಾಷ್ಯ ಬರೆದು ಅಮೂಲ್ಯ ಧರ್ಮಸಾಹಿತ್ಯವನ್ನು ಸೃಷ್ಟಿಸಿ, ಜ್ಞಾನಮಾರ್ಗವನ್ನು ಬೋಧಿಸಿ, ವೇದಾಂತದ ಪ್ರಚಾರ ಮಾಡಿ, ಪ್ಲೇಟೋ, ಅರಿ ಸ್ಟಾಟಲ್ ಮುಂತಾದ ಜಗದ್ವಿಖ್ಯಾತ ತತ್ತ್ವ ಜ್ಞಾನಿಗಳ ಸಾಲಿಗೆ ಸೇರಿ ಹೋಗಿದ್ದಾರೆ. ಇವರದ್ದು ಶುದ್ಧ, ಸುಂದರ, ಶ್ರೇಷ್ಠ ಸಂಸ್ಕೃತದ ಮಾದರಿ ಸಾಹಿತ್ಯವೆನಿಸಿದೆ. ಅವರು ಬದುಕಿದ್ದ 32 ವರ್ಷ ಗಳ ಕಮ್ಮಿ ಕಾಲದಲ್ಲಿ ನೂರಾರುವರ್ಷ ಇದ್ದವರು ಮಾಡುವುದಕ್ಕಿಂತಲೂ ಹೆಚ್ಚು ಘನವಾದ ಕೆಲಸ ವನ್ನು ಮಾಡಿ, ಭಾರತದ ಪ್ರಾಚೀನ ಜ್ಞಾನ ವನ್ನು ಮನವರಿಕೆ ಮಾಡಿಕೊಡಲು ಜನಿಸಿದ ಅತಿ ಶ್ರೇಷ್ಠ ವ್ಯಕ್ತಿಗಳಲ್ಲಿ ಒಬ್ಬರೆನಿಸಿದ್ದಾರೆ.

ಜೀವಕೋಟಿಗಳಲ್ಲಿ ದಯೆ, ಯಜ್ಞ ಯಾಗಾದಿ ಗಳಲ್ಲಿ ಬಲಿ–ಆಹುತಿಗಳ ನಿರಾಕರಣೆ, ಮಠಗಳಲ್ಲಿ ಕಟ್ಟುನಿಟ್ಟಾದ ನಡವಳಿಕೆ, ಸಂನ್ಯಾಸಾಶ್ರಮದ ಪಾವಿತ್ರ್ಯ, ವಿಚಾರ ವಿನಿಮಯದ ಮತ್ತು ತಾರ್ಕಿಕವಾದದ ಅವಶ್ಯಕತೆ, ಜಾತಿಭೇದ ನಿರಸನ ತಾಯ್ನುಡಿಯಲ್ಲಿ ಬೋಧನೆ–ಮೊದಲಾದ ಬೌದ್ಧ ಮತದ ಒಳ್ಳೆಯ ಅಂಶಗಳನ್ನೆಲ್ಲ ವೈದಿಕ ಧರ್ಮ ದಲ್ಲಿ ಸೇರಿಸಿ ಪ್ರಚಾರಮಾಡಿದ ಕೀರ್ತಿ ಶಂಕರಾ ಚಾರ್ಯರಿಗೆ ಸಲ್ಲಬೇಕು.

ಸತ್ಯವನ್ನು ಅರಿತು ಭಗವಂತನ ನಾಮಸ್ಮರಣೆ ಹಾಗೂ ಸತ್ಪುರುಷರ ಸಂಗಮಾಡಿದ ಮನುಷ್ಯರು ಯಾವ ಜಾತಿ, ಮತ, ಪಂಥ, ಲಿಂಗಗಳಿಗೆ ಸೇರಿದ್ದರೂ ಮೋಕ್ಷಕ್ಕೆ ಅರ್ಹರು ಎಂಬುದು ಇವರ ಜ್ಞಾನಮಾರ್ಗದ ಸಾರ. ಆದರೂ ಸಹ ಶಿವ, ವಿಷ್ಣು, ಶಕ್ತಿ, ಗಣಪತಿ, ಕುಮಾರ, ಸೂರ್ಯ ಎಂಬೀ ಷಣ್ಮತಗಳ ಸ್ಥಾಪನೆಮಾಡಿ, ಆ ಆರ್ಚಾ ಮೂರ್ತಿಗಳ ಧ್ಯಾನ–ಪೂಜೆ–ಸಂಕೀರ್ತನೆಗಾಗಿ ನೂರಾರು ಸ್ತೋತ್ರ–ಗೀತೆಗಳನ್ನು ರಚಿಸಿ, ಪರ ಮಾತ್ಮನ ಕರುಣೆಗೆ ಅವಶ್ಯವಾದ ಭಕ್ತಿಮಾರ್ಗ ವನ್ನು ಉಪದೇಶಿಸಿದರು. ಚತುರತೆ, ದಕ್ಷತೆಗಳಿಂದ ಸನಾತನ ಧರ್ಮದ ಸಂಘಟನೆಗಾಗಿ ಹಾಗೂ ಪ್ರಚಾರಕ್ಕಾಗಿ ದೇಶದ ನಾಲ್ಕುಕಡೆಗಳಲ್ಲಿ ಅಂದರೆ ಉತ್ತರದ ಬದರಿಯಲ್ಲಿ ಜೋಷಿ, ಪಶ್ಚಿಮದ ದ್ವಾರ ಕೆಯಲ್ಲಿ ಶಾರದಾ, ಪೂರ್ವದ ಪುರಿಯಲ್ಲಿ ಗೋವ ರ್ಧನ, ದಕ್ಷಿಣದ ಶೃಂಗೇರಿಯಲ್ಲಿ ಆಮ್ನಾಯ (ಶೃಂ ಗೇರಿ) ಎಂಬೀ ಮಠ, ಆಶ್ರಮ, ದೇವಾಲಯಗ ಳನ್ನು ಸ್ಥಾಪಿಸಿ ಸಂನ್ಯಾಸಿವ್ಯವಸ್ಥೆಯನ್ನು ಜೀವಂತ ಗೊಳಿಸಿದರು, ಸ್ವಾರ್ಥವನ್ನು ಬಿಟ್ಟು ಜೀವಿಗಳ ಕಲ್ಯಾಣವನ್ನು ಸಾಧಿಸುವುದೇ ಸಂನ್ಯಾಸಿಗಳ ಧ್ಯೇಯವಾಗಿರಬೇಕೆಂದು ಹೇಳಿ ಗೃಹಸ್ಥರಾಗದೆ ದುಡಿದ ಈ ಮಹನೀಯರು ಭಾರತದೇಶದಲ್ಲೆಲ್ಲಾ ಪ್ರವಾಸಮಾಡಿ ಆಧುನಿಕ ಕಾಲದ ಭೂಶೋಧಕ ರಿಗಿಂತ ಹೆಚ್ಚು ಶ್ರಮವಹಿಸಿ ತಮ್ಮ ದಿವ್ಯ ಸಂದೇ ಶವನ್ನು ಜನರಿಗೆ ತಲಪಿಸಿದರು.

ಶೈವಮತಕ್ಕೆ ಹೆಚ್ಚು ಪ್ರಾಧಾನ್ಯತೆ ಬರಲು, ವೇದಾಂತವೆಂದರೆ ಅದ್ವೈತ ಸಿದ್ಧಾಂತವೇ ಎಂಬ ಭಾವನೆಯು ಪಾಶ್ಚಾತ್ಯರಿಗೆ ಉಂಟಾಗಲು ಕಾರ ಣರಾದ ಶಂಕರಾಚಾರ್ಯರು ವೇದಾಂತಿ, ಕವಿ

(38 ನೇ ಪುಟ ನೋಡಿ)

# ಅನ್ನಮಯ್ಯ ಚಿತ್ರಿಸಿದ ಬಾಲಕೃಷ್ಣ

ಅವತಾರಗಳು ಶಿವನಿಗೆ ಇಲ್ಲವೆಂದೂ ಶ್ರೀಮನ್ನಾರಾಯಣನಿಗೆ ಮಾತ್ರವೆಂದೂ ಪುರಾಣಗಳ ಮೂಲಕ ತಿಳಿದು ಬರುತ್ತದೆ. ಶ್ರೀಮನ್ನಾರಾಯಣನು ಧರ್ಮಸಂಸ್ಥಾಪನೆಗಾಗಿ ಅನೇಕ ಅವತಾರಗಳನ್ನು ಎತ್ತಿದರೂ,ಅದರಲ್ಲಿ ಹತ್ತು ಅವತಾರಗಳು ಪ್ರಧಾನವಾದವು. ಅವುಗಳಿಗೆ ದಶಾವತಾರಗಳೆಂದು, ಆ ದಶಾವತಾರಗಳಲ್ಲಿ ಕೃಷ್ಣಾವತಾರವು ಅತಿ ಮುಖ್ಯವಾದದ್ದು ಎಂದು ಭಾವನೆ. ಆದ್ದರಿಂದ ವೈಷ್ಣವರಿಗೆ ಬೇರೆ ಅವತಾರಗಳಿಗಿಂತ ಕೃಷ್ಣಾವತಾರವೇ ಪ್ರಧಾನವಾದದ್ದು. ಅದರಲ್ಲಿ ಶ್ರೀಕೃಷ್ಣನ ಬಾಲಲೀಲೆಯು ಎಲ್ಲರನ್ನು ಆಕರ್ಷಿಸುತ್ತದೆ, ಆದ್ದರಿಂದ ಕವಿಗಳು ಕೃಷ್ಣನ ಬಾಲಲೀಲೆಯನ್ನು ರಸಮಯವಾಗಿ ವರ್ಣಿಸಿರುತ್ತಾರೆ. ತಮಿಳಿನಲ್ಲಿ ಪೆರಿಯಾಳ್ವಾರ್ ಪಾಶುರಗಳಲ್ಲೂ, ಪುರಂದರ ದಾಸರ ಪದಗಳಲ್ಲೂ, ಕೃಷ್ಣಲೀಲೆಯನ್ನು ವರ್ಣಿಸಿರುವ ರೀತಿಯಲ್ಲಿಯೇ ತೆಲುಗು ಸಾಹಿತ್ಯದಲ್ಲಿ ಅನ್ನಮಯ್ಯನು ಬಾಲಕೃಷ್ಣನ ಲೀಲೆಗಳನ್ನು ವರ್ಣಿಸಿರುವನು. ಅವುಗಳಲ್ಲಿ ಕೆಲವನ್ನು ಪರಿಶೀಲಿಸೋಣ.

ಚಿನ್ನಾರಿಕೃಷ್ಣನು ತಂದೆ ತಾಯಿಗಳಿಗೆ ಮಾತ್ರವಲ್ಲ. ಬಂಧುಗಳಿಗೆ ಮಾತ್ರವಲ್ಲ. ರೇಪಲ್ಲಿಗ್ರಾಮಸ್ಥರಿಗೆಲ್ಲರಿಗೂ ಮುದ್ದಾದವನು. ಆದ್ದರಿಂದ ಆ ಮಗುವನ್ನು ಎಲ್ಲರೂ ಎತ್ತಿಕೊಂಡು ಮುದ್ದಾಡುವರು. ಆ ಬಾಲನನ್ನು ಆಡಿಸುತ್ತಾ ಮುದ್ದಾಡಿಸುತ್ತಾ ತಮ್ಮನ್ನು ತಾವೇ ಮರೆತುಬಿಡುವರು.

ಕಾಲಪರಿಗಣನೆ ಇಲ್ಲದೆ ಮಗುವನ್ನು ಎತ್ತಿಕೊಂಡು ತಿರುಗಾಡಿಸುತ್ತಾರೆ. ಆ ಕಾರಣದಿಂದ ತಾಯಿ ಯಶೋದೆ ಭಯಪಡುತ್ತಾಳೆ. ಮಗುವಿಗೆ ಏನಾಗುವುದೊ ಎಂದು ಗಾಬರಿಪಡುತ್ತಾಳೆ. ಈ ಕಾರಣದಿಂದ ಮಗುವನ್ನು ಎತ್ತಿಕೊಂಡು ಓಡಾಡುವವರನ್ನು ನೋಡಿ ಈ ರೀತಿ ಅನ್ನುತ್ತಾಳೆ.

ಸಾರೆಕು ನಂಟಕುರೇ ಜಡನಂದುರು
ಧೀರುಡಾತಡುನ್ನತವು ದೇಹಿಯಟೆ
ಬಾಯಿಟ ಪೆಟ್ಟಕುರೇ ಪಕ್ಷುಲು ಪಾರೆಡಿ ಪೊದ್ದು
ಓ ಯಮ್ಮ ಬಾಲುಲಕು ನೊಪದಂದುರು
ಮಾಯಪು ಪುಲುಗೊಕಟ ಮಚ್ಚಿಕ ನೀ ಬಾಲುನಿ
ಚೇಯಿಚ್ಚಿ ಎಕ್ಕಿಂಚುಕೊನ ಚೇರೀನಟ
॥ ಸಾರೆಕುನಂಟಕುರೇ ॥
ಪಂಚಲ ತಿಪ್ಪಕುರೇ ಪಾಮುಲು ವೆಳ್ಳೀಟಿ ಪೊದ್ದು
ಕೊಂಚೆಪು ಬಾಲುಲಪೈಕೊನುನಂದುರು
ಮಿಂಚಿನ ಪಾಮೊಕಟಿ ಮೆರಸಿ ಆ ಬಾಲುನಿ
ದಿಂಜಕ ಎಕ್ಕಿಂಚುಕೊನ ತಿರಿಗೇನಟ
॥ ಸಾರೆಕುನಂಟಕುರೇ ॥

ಅಲಮಿಪಟ್ಟಕುರೇ ಅಂಟಕಾಕುಂಡೆಡಿವಾರು
ತೊಲರಮ್ಮ ಬಾಲುಲಕು ದೋಸಮುಂದುರು
ಕಲಿಕಿ ಈ ತಿರುವೇಂಕಟಪತಿ ಕದಿಸಿನ
ಚೆಲಗಿ ವೇಗಮ್ಮ ಚೀರ ಚಿಕ್ಕಿನಟ 11–247

ಅಮ್ಮಾ ನಿಮಗೆ ಒಂದು ಕಿರಿಯ ಬಿನ್ನಹ ಮಾಡಿಕೊಳ್ಳುವೆನು. ಮಗುವನ್ನು ಸುಮ್ಮನೆ ಮುಟ್ಟಬೇಡಿ, ಆ ರೀತಿ ಮಾಡಿದರೆ ಮಗು ಮೊದ್ದಾಗುವವನು, ಈ ಮಗು ಚೆನ್ನಾಗಿ ಬೆಳೆಯುವನೆಂದೂ, ಧರ್ಮವಂತನಾಗುವನೆಂದೂ ಜ್ಯೋತಿಷ್ಯರು, ಹಿರಿಯರು ಹೇಳುತ್ತಿರುವರು, ಆದ್ದರಿಂದ ಮುಟ್ಟಬೇಡಿ. ಸಾಯಂಕಾಲದ ವೇಳೆ–

**ಶ್ರೀ ಎಚ್.ಆರ್. ಗೋಪಾಲಕೃಷ್ಣ.**

ಪಕ್ಷಿ ತಿರುಗುವ ವೇಳೆ – ಮಗುವನ್ನು ಹೊರಗಡೆ ತಿರುಗಾಡಿಸಬೇಡಿ, ಮಾಯಾವಿಯಾದ ಒಂದು ಪಕ್ಷಿ ತನ್ನ ಕೈಯನ್ನು ಕೊಟ್ಟು ಎತ್ತಿಕೊಂಡು ಹೋಗಲಿಕ್ಕೆ ಸಿದ್ಧವಾಗಿದೆ, ಅಷ್ಟೇ ಅಲ್ಲ ಮಗುವನ್ನು ಹುತ್ತದ ಹತ್ತಿರ, ಗಿಡ ಮರಗಳ ನೆರಳಿನಲ್ಲಿ ತಿರುಗಾಡಿಸಬೇಡಿ, ಅದೂ ಅಲ್ಲದೆ ಹಾವುಗಳು ಸಂಚರಿಸುವ ವೇಳೆ. ಚಿಕ್ಕ ಮಕ್ಕಳು ಭಯಪಡುವರು, ಯಾವುದೋ ಒಂದು ದೊಡ್ಡದಾದ ಕಾಳಿಂಗ ಸರ್ಪ ಮಗುವನ್ನು ಎತ್ತಿಕೊಂಡು ಹೋಗಲು ಸಮಯ ಕಾಯುತ್ತಿದೆ. ಮುಟ್ಟಬಾರದವರು ಮಗುವಿನಿಂದ ದೂರವಿರಿ. ಚಿಕ್ಕ ಮಗುವಿಗೆ ದೋಷ ತಗುಲುವುದು.



ಈ ಕೀರ್ತನೆಯಲ್ಲಿ ಸಾಧಾರಣವಾಗಿ ತಾಯಿಗೆ ಇರುವ ಭಯ, ಗಾಬರಿಗಳೇ ಅಲ್ಲದೆ ಅವತಾರ ಕಥೆಯನ್ನು ಪರೋಕ್ಷವಾಗಿ ಅನ್ನಮಯ್ಯನು ಹೇಳಿದ್ದಾನೆ. ಇಲ್ಲಿ ಪಕ್ಷಿ ಎಂದರೆ ಗರುಡ. ಗರುಡ ತನ್ನ ಸ್ವಾಮಿಯಾದ ಶ್ರೀ ಮಹಾವಿಷ್ಣುವಿನ ಆಜ್ಞೆಗಾಗಿ ಕಾದು ಕುಳಿತಿದ್ದಾನೆ. ಅದೇ ರೀತಿಯಲ್ಲಿ ಹಾವು ಎಂದರೆ ಆದಿಶೇಷ. ಆದಿಶೇಷನು ಶ್ರೀಮನ್ನಾರಾಯಣನ ಹಾಸಿಗೆ. ಮುಟ್ಟಬಾರದವರು ಎಂದರೆ ಪಾಪಾತ್ಮರು. ಬಾಲಕೃಷ್ಣನು ರೇಪಲ್ಲೆಯಲ್ಲಿ ಸುಮ್ಮನೆ ಇರುತ್ತಿಲ್ಲ, ಗಲಾಟೆಮಾಡುತ್ತಿರುವನು. ಇಲ್ಲದ ಸಲ್ಲದ ಅಪವಾದಗಳನ್ನು ತಂದುಕೊಂಡು ಬಿಡುತ್ತಿರುವನು. ಇದರಿಂದ ಯಶೋದೆ ಎಷ್ಟೊ ಕಷ್ಟಕ್ಕೆ ಗುರಿಯಾಗುತ್ತಿದ್ದಾಳೆ. ಎಷ್ಟೋಸಾರಿ ಗೊಲ್ಲರ ಚಾಡಿಗಳನ್ನು ಕೇಳಿದ್ದಾಳೆ. ಆಗಿಂದಾಗ್ಗೆ ಬಾಲಕೃಷ್ಣನನ್ನು ಕೋಪದಿಂದ ಎಚ್ಚರಿಸುವಳು. ಬೇರೆಯವರು ಮಾಡಿದ ತಪ್ಪುಗಳು ಕೃಷ್ಣನಮೇಲೆ ಬಂದದ್ದಕ್ಕಾಗಿ ಬಹಳವಾಗಿ ನೊಂದಿರುವಳು. ಆ ರೀತಿಯಾಗಿ ಬಂದು ಹೇಳಿದ ಗೊಲ್ಲರಿಗೆ ಕೆಳಗಿನ ರೀತಿಯಲ್ಲಿ ಹೇಳುತ್ತಾಳೆ.

ಶ್ರೀ ವೆಂಕಟೇಶ್ವರಸ್ವಾಮಿಯ ಅನನ್ಯಭಕ್ತ ಅನ್ನಮಯ್ಯ. ಸುಮಾರು 500 ವರ್ಷಗಳ ಹಿಂದೆ ತೆಲುಗಿನಲ್ಲಿ ಆಗಿ ಹೋದ ಈ ಮಹಾಚೇತನ ಮೂವತ್ತೆರಡು ಸಾವಿರ ಕೀರ್ತನೆಗಳನ್ನು ಸ್ವಾಮಿಯ ಸೇವೆಯಲ್ಲಿ ರಚಿಸಿ ಸ್ವಾಮಿಯ ಕೃಪೆಗೆ ಪಾತ್ರವಾಯಿತು. ಇದೀಗ ಮೇ ತಿಂಗಳಿನಲ್ಲಿ ಅನ್ನಮಯ್ಯನವರ ಜಯಂತಿಯನ್ನು ಎಲ್ಲೆಡೆ ಆಚರಿಸಲಾಗುತ್ತದೆ. ಆ ಸವಿನೆನಪಿನಲ್ಲಿ ಈ ಲೇಖನವನ್ನು ಸಾದರ ಪಡಿಸಲಾಗಿದೆ.

–ಸಂ.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು, ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

ಕಾನರಟೆ ಪೆಂಚರಟೆ ಕಟಕಟಾ ಬಿಡ್ಡಲನು
ನೇನು ಮೀವಲೆನೇ ಕಂಟಿನಯಪ್ಯೆನೆಬಿಡ್ಡನಿ
ಬಾಯಟ ಪಾರವೆ; ಸಿನ ಪಾಲುವೆನ್ನಲುನು
ಚೇಯಿಸೆಟ್ಟಿಕುಂದುರಾ ಚಿನ್ನಿ ಬಿಡ್ಡಲು
ಮೀ ಇಂಡ್ಲ ಜತನಾಲು ಮೀರು ಸೇಸಿಕೊನಕ
ಪಾಯಕ ದೂರೇರೇಲ ಪ್ರತಿಲೇನಿಬಿಡ್ಡನಿ
॥ ಕಾನರಟೆ ಪೆಂಚರಟೆ ॥

ಮೂಸಿನ ಕಾಗುಲ ನೇಯೀ ಮುಂಗಿಟ
ಪೆರುಗುಲೂ
ಆಸಪಡಕುಂದುರಾ ಆಡೇ ಬಿಡ್ಡಲು
ಓಸರಿಂಚಿ ಮೋಸಪೋಕ ಉಂಡಲೇಕ ಮೀರು
ಸೇಸೇರಿಂತೇಸಿ ದೂರು ಚೆಪ್ಪರಾನಿ ಬಿಡ್ಡನಿ
॥ ಕಾನರಟೆ ಪೆಂಚರಟೆ ॥

12–253

ಏನಮ್ಮ ; ಎಲ್ಲರೂ ಕೃಷ್ಣನ ಮೇಲೆ ಚಾಡಿ ಹೇಳುವುದಕ್ಕೆ ಗುಂಪಾಗಿ ಬಂದಿರುವಿರೇನು? ಮಕ್ಕಳನ್ನು ನೀವು ಹಡೆಯಲಿಲ್ಲವೆ, ಬೆಳೆಸಲಿಲ್ಲವೇ? ನಿಮ್ಮಂತೆಯೇ ನಾನು ಒಂದು ಮಗುವನ್ನು ಹಡೆದಿರುವೆನು. ಆದರೂ ನಾ ನಿಮ್ಮನ್ನು ತಿಳಿಯದೆ ಕೇಳುತ್ತೇನೆ. ನೀವುಗಳು ನಿರ್ಲಕ್ಷ್ಯವಾಗಿ ಹಾಲಿನ, ಬೆಣ್ಣೆಯ ಪಾತ್ರೆಗಳನ್ನು ಹೊರಗೆ ಹಾಕಿದ್ದರೆ ಏನೂ ತಿಳಿಯದ ಮಕ್ಕಳು ಅದರಲ್ಲಿ ಕೈಯಿಡದೇ ಇರುವರೇ ? ನೀವುಗಳು ನಿಮ್ಮ ಮನೆಯಲ್ಲಿ ಜಾಗ್ರತೆಯಾಗಿ ಇಲ್ಲದೆ ಸುಮ್ಮನೆ ನನ್ನ ಮಗುವನ್ನು ನಿಂದನೆ ಮಾಡುವಿರಿ. ಏಕೆ ?

ದೊಡ್ಡದಾದ ಪಾತ್ರೆಯಲ್ಲಿ ತುಪ್ಪವನ್ನು ಮುಚ್ಚಿಟ್ಟರೆ, ಎಲ್ಲರಿಗೂ ಕಾಣುವ ರೀತಿಯಲ್ಲಿ ಮೊಸರು ಇಟ್ಟರೆ, ಆಟ ಆಡುವ ಮಕ್ಕಳಿಗೆ ಆಸೆ ಹುಟ್ಟುವುದಿಲ್ಲವೇ? ನೀವುಗಳು ಜಾಗ್ರತೆಯಾಗಿ ಮೋಸ ಹೋಗದ ರೀತಿಯಲ್ಲಿ ಇಟ್ಟುಕೊಳ್ಳಬೇಕೇ ಹೊರತು ನನ್ನ ಮಗುವಿನ ಮೇಲೆ ಹಾಕಬಾರದು. ಈ ಕೀರ್ತನೆಯಲ್ಲಿ ತಾಯಿಗೆ ಮಗುವಿನಮೇಲೆ ಇರುವ ಅಭಿಮಾನ ಚೆನ್ನಾಗಿ ಸ್ಪಷ್ಟವಾಗುವುದು.

ತಿಳಿದೋ ತಿಳಿಯದೆಯೋ ಕಾರಣವಿಲ್ಲದೆ ಬೈದರೆ ಅದರ ಫಲಿತಾಂಶವು ತಪ್ಪದೆ ಇರುತ್ತದೆ. ಆದ್ದರಿಂದ ಅವರ ಬೈಗಳಿಂದ ಬಾಲಕೃಷ್ಣನಿಗೆ ಯಾವ ಯಾವ ತೊಂದರೆ ಬರುವುದೊ ಎಂದು ಯಶೋದೆ ಭಾವಿಸಿ ಗೋಪಿಕೆಯರು ಮತ್ತೆ ಬರಬಾರದೆಂದು ಚೆನ್ನಾಗಿ ಬೈದು ಕಳುಹಿಸಿದಳು.

ವಜ್ರ, ವೈಡೂರ್ಯ, ಮರಕತ, ಮಾಣಿಕ್ಯ, ಪುಷ್ಯರಾಗ, ಗೋಮೇಧಿಕ, ಪ್ರವಾಳ, ನೀಲ ಮಣಿ ಇವುಗಳನ್ನು ನವರತ್ನಗಳು ಅನ್ನುತ್ತಾರೆ. ಇವುಗಳ ಬೆಲೆಯನ್ನು ಸಂಖ್ಯೆಗಳಿಂದ ಹೇಳಲು ಸಾಧ್ಯವಿಲ್ಲದ್ದು. ನವರತ್ನ ಒಂದಿದ್ದರೆ ನಾಕು ಎಷ್ಟೋ ಅಮೂಲ್ಯಗುಣಗಳಿವೆ.

ಬಾಲಕೃಷ್ಣನು ಯಶೋದೆಯ ಮಗನೇ ಅಲ್ಲ ದೇವಕಿಯ ಮಗನು ಕೂಡ. ಇಬ್ಬರು ತಾಯಂದಿರ ಮುದ್ದಿನಮಗು. ಯಶೋದೆ ಮನೆಯ ಪ್ರಾಂಗಣದಲ್ಲಿ ಬಿದ್ದಿರುವ ಮುತ್ತು, ಗೋಪಿಯರ ಅಂಗೈಯಲ್ಲಿರುವ ಮಾಣಿಕ್ಯ, ಮುಯ್ಯಿ ತೆಗೆದುಕೊಳ್ಳಬೇಕೆನ್ನುವ ಕಂಸನ ಪಾಲಿಗೆ ವಜ್ರ, ಮೂರು ಲೋಕವನ್ನು ವ್ಯಾಪಿಸಿದ ಕಾಂತಿಯುತವಾದ ಮರಕತ, ಗೋವರ್ಧನ ಪರ್ವತವನ್ನು ಎತ್ತಿ ಗೋವುಗಳನ್ನು ಗೋಪಾಲರನ್ನು ಕಾಪಾಡಿದ ಗೋಮೇಧಿಕ, ರುಕ್ಮಿಣಿಗೆ ಪ್ರವಾಳನಾದವನು. ಶಂಖ ಚಕ್ರದ ಮಧ್ಯೆಯಿರುವ ಪುಷ್ಯರಾಗ. ವೆಂಕಟಾದ್ರಿಮೇಲೆ ಇರುವ ಇಂದ್ರನೀಲ, ಕ್ಷೀರಸಮುದ್ರವನ್ನು ಬಿಡದ ದಿವ್ಯರತ್ನ, ಆ ರೀತಿ ಇರುವ ಪದ್ಮನಾಭನು ಬಾಲನ ರೀತಿಯಲ್ಲಿ ತಿರುಗುತ್ತಿರುವನೆಂದು ಈ ಕೆಳಗಿನ ಕೀರ್ತನೆಯಲ್ಲಿ ಹೇಳಿದ್ದಾರೆ.

ಮುದ್ದುಗಾರೇ ಯಶೋದ ಮುಂಗಿಟ
ಮುತ್ಯಮು ವೀಡು
ತಿದ್ದರಾನಿ ಮಹಿಮಲ ದೇವಕೀಸುತುಡು.
ಅಂತನಿಂತ ಗೊಲ್ಲೆತಲ ಅರಚೇತಿ ಮಾಣಿಕಮು
ಪಂತಮಾಡೇ ಕಂಸುನಿ ಪಾಲಿ ವಜ್ರಮು
ಕಾಂತುಲ ಮೂಡುಲೋಕಾಲ ಗರುಡ ಪಚ್ಚ
ಪೂಸ
ಚೆಂತಲ ಮಾಲೋನುನ್ನ ಚಿನ್ನಿಕೃಷ್ಣುಡು
॥ ಮುದ್ದುಗಾರೇ ಯಶೋದ ॥
ರತಿಕೇಳಿ ರುಕ್ಮಿಣಿಕಿ ರಂಗುಮೋವಿಗಡಮು
ಮಿತಿ ಗೋವರ್ಧನಪು ಗೋಮೇಧಿಕಮು
ಸತಮೈ ಶಂಖಚಕ್ರಾಲ ಸಂದುಲ
ವೈಡೂರ್ಯಮು
ಗತಿಯೈ ಮಮ್ಮು ಕಾಚೇಟಿ ಕಮಲಾಕ್ಷುಡು
॥ ಮುದ್ದುಗಾರೇ ಯಶೋದ ॥
ಕಾಳಿಂಗುನಿ ತಲಲಪೈ ಕಪ್ಪಿನ ಪುಷ್ಯರಾಗಮು
ಏಲೇಟಿ ಶ್ರೀವೆಂಕಟಾದ್ರಿ ಇಂದ್ರ ನೀಲಮು
ಪಾಲಜಲನಿಧಿಲೋನ ಪಾಯನಿದಿವ್ಯ ರತ್ನಮು
ಬಾಲುನಿವಲೆ ತಿರಿಗೇ ಪದ್ಮನಾಭುಡು

8–288

ಕವಿಗಳಲ್ಲಿ ಕೆಲವರು ಸಾಮಾನ್ಯರಿಗೆ ತಕ್ಕಂತೆ ಕಾವ್ಯ ರಚಿಸುವರು. ಮತ್ತೆ ಕೆಲವರು ಪಂಡಿತರು ಮಾತ್ರ ಮೆಚ್ಚುವ ರೀತಿಯಲ್ಲಿ ಬರೆಯುವರು. ಆದರೆ ಅನ್ನಮಯ್ಯನು ಸಾಮಾನ್ಯರೂ ಪಂಡಿತರೂ ಮೆಚ್ಚುವಂತಹ ರೀತಿಯಲ್ಲಿ ಕೀರ್ತನೆಗಳನ್ನು ಬರೆದ ಮಹಾಕವಿ.

# ಮತ್ತೆ ನೋಡುವಾಸೆ.



ರಾಗ – ಮುಖಾರಿ ತಾಳ – ಝಂಪೆ

ಎಷ್ಟು ಸಲ ನೋಡಿದರು। ಮತ್ತೆ ನೋಡುವಾಶೆ
ಇಷ್ಟ ಮೂರುತಿ ನಿನ್ನ। ಶ್ರೀ ವೆಂಕಟೇಶ ॥ ಪ ॥

ಕಷ್ಟಗಳ ಪರಿಹರಿಸು। ಸೇವೆಗೋಸುಗ ಬಂದೆ
ಇಷ್ಟಾರ್ಥವಿತ್ತು ಸಲ। ಹೋ, ಶ್ರೀನಿವಾಸ ॥ ಅ.ಪ ॥

ಚರಣ

ಕಾರ್ತೀಕ ಮಾಸದಾ ನಲ್‌ಸೋನೆ ಸುರಿಯುತಿದೆ
ಸಾಲುಜನರಲಿ ನಿಂತು ಧರ್ಮದರುಶನ ಪಡದೆ।
ದೀವಳಿಗೆ ಸುದಿನ ತಿರುಮಂಜನದ ಸೇವೆಯಲಿ
ಚೆಲುವಕಂಗಳ ಮೂಗ ಮುದ್ದು ಮುಖವಾ ಕಂಡೆ ॥ ೧ ॥

ಶಾತ್ತುಮುರೈ ಸೇವೆಯಲಿ ಶ್ರೀ ವೈಷ್ಣವರೊಡನೆ
ಆಳ್ವಾರ ಪಾಶರವ ಕಿವಿಗೊಟ್ಟು ಆಲಿಸಿದೆ।
ತೋಮಾಲೆ ಸೇವೆಯಲಿ ಸಿಂಗರಕೆ ಬೆರಗಾದೆ
ಏಕಾಂತ ಸೇವೆಯಲಿ ಹರುಷದಲಿ ಮಲಗೆಂದೆ ॥ ೨ ॥

ವಜ್ರಾಂಗಿ ತೊಟ್ಟಿರುವ ಉತ್ಸವದ ಮೂರುತಿಯ
ಸೊಬಗ ಕಲ್ಯಾಣ ಬ್ರಹ್ಮೋತ್ಸವ ದಿನ ಕಂಡೆ।
ಚಿನ್ನದ ಗರುಡಶೇಷನನೇರಿದ್ದ ಕಂಡೆ
ಹೊಳೆಹೊಳೆವ ಬಂಗಾರ ವಿಮಾನ ಕಳಶ ಕಂಡೆ ॥ ೩ ॥

ಭವರೋಗ ದುಃಖಗಳ ಹೊರದೂಡೆ ನೀನಂಟು
ಕಪ್ಪ ಕಾಣಿಕೆ ಕೊಟ್ಟು ವಾಸಿಯಾದವರುಂಟು।
ಬಲಗೈಲಿ ತೋರುತಿಹೆ ಶರಣಾಗು ಎನಗೆಂದು
ಎಡಗೈಲಿ ಭಯವೇಕೊ 'ನಾನೊರೆವೆ' ನೆಂದು ॥ ೪ ॥

ಪಾಮರರು ಧ್ಯಾನಿಸಲು ಧೃಡ ಚಿತ್ತದಿ ನಿನ್ನಾ
ಸಾಕಾರ ಗುಣರನ್ನ ಶ್ರೀಲಕುಮಿಸಂಪನ್ನಾ।
ನಿನ ಭಕುತಿ ಮುಕುತಿಗೆ ಪ್ರತ್ಯಕ್ಷಪಾವನ್ನಾ
ವೈಕುಂಠದಾನಂದ ಸಾನ್ನಿಧ್ಯ ಪ್ರಸನ್ನಾ ॥ ೫ ॥

—ಶ್ರೀ ಬಿ. ಎಸ್. ರಾಮಾಚಾರ್.

# ಪುರಂದರ ದಿವ್ಯದಿನಚರಿ

(ಒಂದು ಕಲ್ಪನೆ)

ಶ್ರೀ ವಿ. ಶ್ರೀನಿವಾಸಮೂರ್ತಿ

ಎಂತಹ ಸುಂದರ ಪಟ್ಟಣ ಈ ಪಂಪಾಕ್ಷೇತ್ರ; ಇಲ್ಲಿನ ರಾಜ ವೈಭವ, ಸುವರ್ಣಸಾಮ್ರಾಜ್ಯದ ಸಿರಿ ವರ್ಣಿಸಲು ಬಾರದಂತೆ. ಇನ್ನೇನು ಬೆಳಗಾಯಿತೇ ಆಯಿತು. ಬೆಳಗಾಗುವ ಮುಂಚೆಯೇ ತುಂಗಾ ಸ್ನಾನ ಮಾಡಿ ಬಂದುದು ಗಾತ್ರಕ್ಕೆಷ್ಟು ಹಿತವೋ ಸರಿ. ಮನಸ್ಸಿಗೆ ಎಷ್ಟು [illegible]ಕರವಾಗಿತ್ತು [illegible]- ಅದಾ ಇದೆಲ್ಲಿಯ ಗೀತೆ "ಏಳು ನಾರಾಯಣ ಏಳು ಲಕ್ಷ್ಮೀರಮಣ– ಏಳು ಶ್ರೀಗಿರಿಯೊಡೆಯ ವೆಂಕಟೇಶ" ಎಂತಹ ಸುನಾದದ ಸುಂದರ ಗೀತೆ. ಯಾರಿರಬಹುದು ಬೆಳಕು ಹರಿಯುವ ಮೊದಲೇ ದೇವಗಾನವನ್ನು ಹರಿಸಿರುವರು? ಜನರೆಲ್ಲರೂ ನಾರದಾಂಶರೆಂದೆನ್ನುವ ಶ್ರೀ ಪುರಂದರ ದಾಸರಲ್ಲದೆ ಇವರು ಬೇರೆ ಯಾರಿರಲು ಸಾಧ್ಯ! ಪಂಪಾ ಕ್ಷೇತ್ರಕ್ಕೆ ತಮ್ಮ ಪುಣ್ಯಕಾರ್ಯ ವಿಶೇಷದಿಂದ ಭಾಗ್ಯ ತಂದಿತ್ತ ಆ ವ್ಯಾಸರಾಯರ ಶಿಷ್ಯ ದಾಸರೇ ಹಾಡುತ್ತಿರಬೇಕು. ಅಗೋ ಅವರೇ ಕಾಣುತ್ತಿರುವರು. ಹಣೆಯಲ್ಲಿ ತುಲಸೀಮೃತ್ತಿಕೆ, ಕೈಯ್ಯಲ್ಲಿ ತುಲಸಿಯ ಬುಟ್ಟಿ, ಕೊರಳಲ್ಲಿ ತುಲಸಿ ಮಣಿ ಮಾಲೆಗಳು. ಬಲು ಸುಂದರರು ದಾಸರು.



"ಒಲ್ಲನೋ ಹರಿ ಕೊಳ್ಳನೋ ಎಲ್ಲ ಸಾಧನ
ವಿದ್ದು ತುಲಸಿಯಿಲ್ಲದ ಪೂಜೆ"
"ಸಂತತ ಹನ್ನೆರಡುಕೋಟಿ ಸುವರ್ಣ ಪುಷ್ಪ
ಸಮರ್ಪಿಸಲು
ಅಂತಾ ಫಲದ ಕೋಟಿ ಕೋಟಿ ಗುಣಿತ
ತುಲಸೀದಳಕೆ
ತಂತು ಮಾತ್ರ ಭಕ್ತಿಯಲಿ ತವಕದಿ
ಪೂಜಿಸು ಶ್ರೀ
ಮಂತ ಶ್ರೀ ಪುರಂದರ ವಿಠಲ ವೈಕುಂಠ
ವಸೀವ"

ಎಂದಿರುವರು. ಈಗ ತುಲಸಿಯನ್ನು ತಂದು ದೇವರನ್ನೆಬ್ಬಿಸುತ್ತಿರುವರು. "ದಾಸರೆಲ್ಲರು ಬಂದು ಧೂಳಿ ದರ್ಶನಕೆ 'ಕಾದು' ತಾಳ ದಂಡಿಗಳನ್ನು ಹಿಡಿದು–ಕೇಶವಾ–ನಿನ್ನ ಸಿ ರಿ ನಾ ಮ" ವನ್ನು ಹಾಡುತ್ತಿರುವರು. ಭಕ್ತರು "ಕಾಸಿದ ಹಾಲನ್ನು ಕಾವಡಿಯಲ್ಲಿ" ತಂದಿರುವರು. "ಲೇಸಾದ ಕೆನೆಮೊಸರು ಬೆಣ್ಣೆ" ಗಳಿವೆ. ಮೆಲುವಿಯಂತೆ ಏಳು. "ಶೇಷಶಯನನೆ ಏಳು" –ಸಮುದ್ರ ಮ ಥ ನ ಮಾಡು" – "ದೇಶ ಕೆಂಪಾಯಿತು" ಸುರರೆಲ್ಲರೂ "ಅರಳು ಮಲ್ಲಿಗೆ, ಜಾಜಿ, ಪರಿಮಲದ ಪುಷ್ಪಗಳನ್ನು" ತಂದಿರುವರು. "ಅರವಿಂದಲೋಚನ– ಕೋಳಿ ಕೂಗಿತು. ಏಳು–ಪುರಂದರ ವಿಠಲ," ಏಳು ಬೆಳಗಾಗಿದೆ ಎಂದು ದಾಸರು ದೇವೇಶನನ್ನು ಎಚ್ಚರಗೊಳಿಸುತ್ತಿರುವರು.

ಆಗೋ ದಾಸರು ತಮ್ಮ ಮನೆಯನ್ನು ತಲಪಿದ್ದಾರೆ. ಮನೆಯ ಅಂಗಳ ಮುಂಭಾಗ–ಸ್ವಚ್ಛವಾಗಿ ಸಾರಿಸಿ ಬೆಳಗಿಸಿ ರಂಗವಲ್ಲಿಯನ್ನಿಕ್ಕಿದೆ. ಮಂಗಳ ಮಯತೆ ದಟ್ಟವಾಗಿ ತುಂಬಿರುವ ಎಂತಹ ಸುಂದರ ರಂಗವಲ್ಲಿ ಚಿತ್ರಗಳಿವು. ಇವನ್ನು ಯಾರಾದರೂ ದೇವತಾ ಸ್ತ್ರೀಯರೇ ಬಿಡಿಸಿರಬೇಕು ಎನಿಸುತ್ತದೆ. ಗಂಗೆ–ತುಂಗಭದ್ರೆಯರೇ ಇಲ್ಲಿ ಬಂದಿದ್ದರೇನೋ?

ತಲೆಬಾಗಿಲಿನಲ್ಲಿ ದಾಸರನ್ನು ಸ್ವಾಗತಿಸಿ ನಮಸ್ಕರಿಸುತ್ತಿರುವರು – ಆ ಅಲೌಕಿಕ ಕಾಂತಿಯ ದೇವಿಯು, ದಾಸರ ಪತ್ನಿ–ಸೌಭಾಗ್ಯವತಿ ಸರಸ್ವತೀಬಾಯಿಯವರೇ ಇರಬೇಕು. ದಾಸರಿಗೆ ನಮಸ್ಕರಿಸಿ ಎದ್ದಿರುವ ಮುಖದಲ್ಲಿ ಎಂತಹ ಸೌಭಾಗ್ಯ ಸಿರಿ–ಶಾಂತಿಗಳಿವೆ. ದಾಸರಿಂದ ದಿನದ ಕಾರ್ಯದ ಬಗೆಗೆ ಸೂಚನೆ ಬೇಡಿ ಪಡೆಯುತ್ತಿರುವರು.

ದಾಸರು ಮತ್ತೆ ಮನೆಯಿಂದ ಹೊರಟಿರುವರು. ಗುರು ವ್ಯಾಸರಾಯರ ದರ್ಶನಕ್ಕಿರಬೇಕು–ಹೆಜ್ಜೆ ಮಠದೆಡೆಗೆ ಬೀಳುತ್ತಿವೆ. "ಗುರುವ್ಯಾಸರಾಯರ ಚರಣವೆನಗೆ ಗತಿ ಪುರಂದರವಿಠಲನ ಅರಿತೆ ಇವರಿಂದ". "ಇವರು ಮಾನಸ ಪೂಜೆಯ ಮಾಡೆ, ದಾನವಾಂತಕ ರಂಗನು ತಾನೆ ಮೆಚ್ಚಿ ಬಂದ ಗೋಪಾಲಕೃಷ್ಣ" 'ಜ್ಞಾನಿಗಳರಸನೆ ಗುರುವ್ಯಾಸರಾಯ' ಎಂದು ದಾಸರು ಹಾಡಿರುವುದನ್ನು ಕೇಳಿ ದಾಸರ ಗುರುಭಕ್ತಿಯ ನಿದರ್ಶನ ಇಂದು ದೊರೆತಂತಾಯಿತಲ್ಲವೇ. ದಾಸರು, ಸುಮಾರು ಒಂದೆರಡು ತಾಸಿನ ಸಮಯದಿಂದ ಮಠದಲ್ಲಿಯೇ ಇರುವರಲ್ಲ. ಇದೋ ಸ್ವಗುರು ದರ್ಶನದಿಂದ ಪಾವನರಾಗಿ; ತತ್ತ್ವ ವಿಮರ್ಶೆ ಚಿಂತನೆಗಳನ್ನು ನಡೆಸಿ ಪ್ರಫುಲ್ಲ ಮನಸ್ಕರಾಗಿ ಮನೆಗೆ ಹಿಂತಿರುಗುತ್ತಿರುವರು ಈಗ.

ಮನೆಯಲ್ಲಿ ದಾಸರು ಮೊದಲ ಸ್ನಾನ ಮುಗಿಸಿ ತಮ್ಮ ಆಹ್ನಿಕಾದಿಗಳನ್ನು ಮುಗಿಸಿದಂತಿದೆ. ಹಣೆಯಲ್ಲಿ ಊರ್ಧ್ವಪುಂಡ್ರ. ತಂಬೂರಿಧರಿಸಿ, ದಂಡಿಗೆ. –ಚಿತ್ತಗಳನ್ನು ಹಿಡಿದ ಕೈಗಳು. ಕಾಲಲ್ಲಿ ಗೆಜ್ಜೆ. ಭುಜದಲ್ಲಿ ಗೋಪಾಳ ಬುಟ್ಟಿ, ಜೋಳಿಗೆಗಳಿವೆ. ಜೋಳಿಗೆಯೂ ದೊಡ್ಡದೇನೂ ಅಲ್ಲ. ಐದಾರು ಮಂದಿಗಾಗುವ ಪದಾರ್ಥಗಳಷ್ಟೇ ಹಿಡಿಸು

ವಂತಹುದು. ಆದರೂ ಅದು ಅಕ್ಷಯ ಪಾತ್ರೆಯೇ ಸರಿ. ಯಾವ ಸ್ಥಳದಲ್ಲಿಯಾದರೂ ಪುಣ್ಯಾತ್ಮರ ಸಂಖ್ಯೆ ವಿರಳ ಹೌದಷ್ಟೆ. ಆದರೂ ದಾಸರು ಮಹಾಪುಣ್ಯವಂತರು. ಅವರು ಬಂದ ಊರಿನಲ್ಲಿ ದಾಸರಿಗೆ ನೀಡದೆ ಭೋಜನ ಮಾಡಿದರೆ ವ್ರತ ಭಂಗವಾದಂತೆ ಎಂದೆನಿಸುವ ಮನದ ಹಲವಾರು ಭಕ್ತರಿಗಂತೂ ಕೊರತೆಯಿರಲು ಅಸಾಧ್ಯವೇ ಸರಿ. ಅಂತಹವರು ನೀಡಬಂದುದಷ್ಟೇ ವಿಪುಲ–ದಾಸರ ಜೋಳಿಗೆಗೆ ಬಿದ್ದಾಗ. ಮತ್ತು ದಾಸರ ಮಹಿಮೆಯನ್ನರಿತು, ಅವರಿಂದ ನಿವೇದಿತವಾದ ಪರಮಾತ್ಮ ಪ್ರಸಾದವನ್ನುಂಡು, ಧನ್ಯತೆಯನ್ನು ಹೊಂದುವ ಭಾವದಿಂದ ದೈವಪ್ರಸಾದವನ್ನು ಬಯಸಿ ಬರುವ ಜ್ಞಾನಿಗಳೂ ಹಲವರೇ ಅಷ್ಟೇ. ದಾಸರಾದರೋ ಹರಿ ಪ್ರೀತಿಯಾಗಲೆಂದು, ಯಾಯವಾರ ಮಾಡಿ ವಿಪ್ರರಿಗೆ ಮೃಷ್ಟಾನ್ನ ನೀಡುವ ಪದ್ಧತಿ ತಪ್ಪದೆ ನಡೆಸುವರು. ಇದೋ ದಾಸರು ಈಗ ಯಾಯವಾರಕ್ಕೆ ನಡೆದರು. ಜೊತೆಯಲ್ಲಿ ನಾಲ್ವರು ಪುತ್ರರು ತಂದೆಯೊಡನೆ ವಾದ್ಯ–ತಾಳ–ಮೇಳ ಧ್ವನಿಗೂಡಿಸಿ ನಡೆದರು.

ದಾಸರು ಬೇಡಲು–ಕೊಡಲು ಹೊರಟಿದ್ದಾರೆ. ಉಪದೇಶಾಮೃತವು ಅವರ ವದನಕಲಶದಿಂದ ಸವಿ–ಸವಿ ಗಾನ ರೂಪದಿಂದ ಚಿಮ್ಮಿ ಸೂಸಿ ಹರಿಯುತ್ತಿದೆ. ಅವರ ವಾಣಿಯೋ ಅತಿ ಮಧುರ–ಅದರ ಆ ರೂಪಗಳು ಸುಂದರವಾದುವು–ಮನಮುಟ್ಟುವಂತಹುವು. ನೈಮಲಿಸುವ ಗಾನ ವಾಹಿನಿಯಾಗಿ ಅದು ಪ್ರಕಟವಾಗುತ್ತಲಿದೆ. ಮಧ್ಯಾಹ್ನದ ಬಿಸಿಲಿನ ವೇಳೆಯಲ್ಲಿ ತಂಪಾದ ಪರಿಮಳಯುಕ್ತ ಗಾಳಿಯನ್ನು ಹಾಕಿಸಿಕೊಂಡ ಅನುಭವವಾಗುತ್ತಿದೆ–ಕೇಳುವವರೆಲ್ಲರಿಗೆ.

"ಆದದ್ದೆಲ್ಲ ಒಳಿತೇ ಆಯಿತು–ನಮ್ಮ ಶ್ರೀಧರನ ಸೇವೆಗೆ ಸಾಧನ ಸಂಪತ್ತಾಯಿತು." ನಾಚಿಕೆ ಬಿಟ್ಟು "ದಂಡಿಗೆ–ಬೆತ್ತ" "ಗೋಪಾಳ ಬುಟ್ಟಿ" ಹಿಡಿದಿದ್ದೇನೆ, "ತುಳಸಿ ಮಾಲೆ" ಹಾಕಿದ್ದೇನೆ, ಇದೆಲ್ಲವೂ ಆ ಪುಣ್ಯವಂತೆ "ಹೆಂಡತಿ" ಯಿಂದಾದುದು, ಆಕೆಯ "ಕುಲ ಸಾ ವಿ ರವಾ ಗ ಲಿ" ಎಂದೆಲ್ಲ ಹಾಡುತ್ತ, ದಾಸರು ನಾರಿಯರಿಗೆ ತಮ್ಮ ತಮ್ಮ ಪುರುಷರು ಶ್ರೀಹರಿ ಸೇವೆಯಲ್ಲಿ ತೊಡಗಲು ಅನುಗೊಳಿಸಿರೆಂದು ಕರೆ ಕೊಡುತ್ತಿರುವರು. ನೀರಿಗೆ ಹೋಗುತ್ತಿರುವ ನಾರಿಯರನ್ನು ಬಿಂದಿಗೆ ಕೊಡಿರೆಂದು ಬೇಡಿ "ತಾರಕ್ಕ ಬಿಂದಿಗೆ ನೀರಿಗೆ ಹೋಗುವೆ– ತಾರೇ ಬಿಂದೀಗೆಯ" "ಅಜ್ಞಾನವೆನ್ನುವ ನೀರನ್ನು ಚೆಲ್ಲಿ, ಸುಜ್ಞಾನವೆನ್ನುವ ನೀರನ್ನು ತರುವೆನು" "ಪುರಂದರ ವಿಠಲನ ಅಭಿಷೇಕಕ್ಕೆ ಬೇಕು" ಎಂದು ಸಾರುತ್ತಿರುವರು. ಆಚೆಯ ತುರುಕರ ಕೇರಿಯ ಕಡೆಯಿಂದ ಬಂದ ಆಕಳು–ಕರುಗಳನ್ನು ಕಾಣುತ್ತಾ–"ತುರುಕರು ಕರೆದರೆ ಉಣಬಹುದಣ್ಣ" ಎಂದಾಗ ತುರುಕವರ್ಗದ ಶ್ರೋತೃಗಳು ಆನಂದಿಸುತ್ತಾರೆ. "ಅದೆಂತು? ಎಂದು ಇತರರು ಪ್ರಶ್ನಿಸಿದಾಗ "ತುರು–ಕರು" ಮೊಲೆಯನ್ನುಂಡನಂತರ ಹಾಲನ್ನು "ಕರೆದರೆ" ಉಣಲಿಕ್ಕೆ ಬಾಧಕವೇನಿದೆ ಹಾಲು ಕುಡಿಯಲು ರುಚಿಕರ–ಪುಷ್ಟಿಕರವೂ ಹೌದು. ಪುರಂದರ ವಿಠಲನ "ಅಭಿಷೇಕಕ್ಕೆ" ಹಾಲು ಬೇಕಷ್ಟೆ? ತುರುಕರುವಿನ ಕೂದಲು ಗಂಗಾವನ–ಗೋಮೂತ್ರಗಳು ಶುದ್ಧಿಕಾರಕಗಳಾಗಿ ಪಂಚಗವ್ಯಕ್ಕೆ ಬೇಕೇ ಬೇಕಲ್ಲವೇ? ಎಂದು ದಾಸರು ಹಾಡಿ ತೋರಿಸುತ್ತಾ ನಡೆಯುತ್ತಾರೆ.

ಹಣ್ಣಿನಂಗಡಿಯ ಮುಂದೆ, ದಾಸರು ಹಣ್ಣು ಮಾರುವವರಾಗುತ್ತಾರೆ. "ಹಣ್ಣು ಕೊಳ್ಳಿ ಹವ್ಯ ಕವ್ಯ ಹಣ್ಣು–ಸವಿಯ ಸಕ್ಕರೆ ಹಣ್ಣು–ಭವರೋಗಗಳನೆಲ್ಲವ ಪರಿಹರಿಪ ಹಣ್ಣು ನವನೀತವಾದಹಣ್ಣು' ಜೀವಗೆ ಅಂಜದ ಹಣ್ಣು–ಪವನಸುತನರಸ ಶ್ರೀ ರಾಮನೆಂಬ ಹಣ್ಣು–ಪುರಂದರ ವಿಠಲ ಎಂಬ ಹಣ್ಣು" ಎಂದು ಹರಿನಾಮದ ಹಣ್ಣನ್ನು ಬಲು ಸುಲಭದ ಬೆಲೆಗೆ ಮಾರುತ್ತ ನಡೆಯುತ್ತಾರೆ. ಜನರನ್ನು "ಅಚ್ಯುತ ಪೇಟೆಗೆ ರಾಮನಾಮಾಮೃತ ಮಾರಲು ಬಂದಿದೆ–ಕೊಂಬುವವರೆಲ್ಲ ಪ್ರೇಮದಿಂದ ಬಂದು ಮನಸಿಗೆ ಬಂದಂತೆ ಅಳೆದು ಕೊಳ್ಳಿ–ರಾಮಟಂಕೆಯ ಸಲಿಗೆ– ಶ್ರೀ ಕೃಷ್ಣನೆಂಬ ಧರ್ಮದ ಸಂತೆ ನೆರೆದಿದೆ" ಎಂಬ ಪೇಟೆ ಸುದ್ದಿ ಧಾರಣೆಗಳನ್ನು ಬಿತ್ತರಿಸುತ್ತಿರುವರು ಮನೆಮನೆಯಿಂದ ಸೂಸುತ್ತಿರುವ ಅಡಿಗೆಯ ಸುವಾಸನೆಗಳು ದಾಸರನ್ನು, ಮಾನಿನಿಯರಿಗೆ "ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ–ವಿಠಲನಾಮ ತುಪ್ಪ ಬೆರೆಸಿ" ತಮ್ಮ ಪತಿ–ಪರಿವಾರದವರಿಗುಣಿಸಿ-ತಾವೂ ಉಂಡು ಬಾಯಿ ಚಪ್ಪರಿಸಿ "ಆನಂದದಿಂದ ತೇಗಿ" ತೃಪ್ತಿ ಪಡೆಯುವ ಬಗೆಯನ್ನು ಬೋಧಿಸಲು ಪ್ರೇರಕವಾಗುತ್ತಿವೆ.

ತಾವೂ ದಾಸರಂತೆ ಹಾಡಿ ನಲಿಯಬೇಕೆನ್ನುವವರಿಗೆನ್ನುತ್ತಿದ್ದಾರೆ ದಾಸರು. "ತಾಳ ಬೇಕು–ತಕ್ಕ ಮೇಳ ಬೇಕು–ಶ್ರೀಲೋಲನ ಚರಿತೆ ಹೇಳುವ ದಾಸರಿಗೆ" ಎಂದು ಹೇಳಿ, "ಗಳ ಶುದ್ಧಿ ಇರಬೇಕು" ತಾವು ಮೊದಲು "ಚೆನ್ನಾಗಿ ತಿಳಿದು" ಅನಂತರ ಹೇಳಬೇಕು. "ಕಳವಳ ಬಿಡಬೇಕು–ಮುಖದಲ್ಲಿ ಕಳೆಯಿರಬೇಕು– ಯತಿಪ್ರಾಸ ಗಮನಿಸಿ ಗತಿಗೆ ನಿಲ್ಲಿಸಬೇಕು – ಹರಿದಾಸನಾಗಬೇಕು–ಪುರಂದರ ವಿಠಲನಲ್ಲಿ ಸ್ಥಿರಚಿತ್ತವಿರಬೇಕು" ಎಂದು ಹಿತವಚನವಾಡಿ ಮಾರ್ಗದರ್ಶನ ಮಾಡಿ ನಡೆಯುತ್ತಾರೆ. ಯಾರೋ ಹಲವರು ದಾಸವರ್ಗವನ್ನು ಹಿಯ್ಯಾಳಿಸಿ – "ಏನು ದರಿದ್ರ ದಾಸರೋ ಇವರು" ಎಂಬುದು ಕಿವಿಗೆ ಬೀಳುತ್ತದೆ. "ಹರಿದಾಸರು ದರಿದ್ರರಲ್ಲ–ಹರಿದ್ರೋಹಿಗಳ – ಸಿರಿವಂತರೆನ್ನಲಾಗದು– ಹರಿಗೆ ಹರಿದಾಸರ ಮೇಲಿದ್ದ ಕರುಣ ಸಿರಿಯದೇವಿಯ ಮೇಲಿಲ್ಲ" ಎಂದು ಹೇಳುವರು. ಯಾರ ಬೈಗಳಿಂದಲೂ ಕೋಪತಾಪ ಬಾರದೆಂಬುದಕ್ಕೆ, "ಪುರಂದರ ವಿಠಲನ ಆಳುಗಳಿಗೆ ಎಲ್ಲಿಹುದು ಮಾನಾಭಿಮಾನಾ ?" ಎಂಬ ಮಾತನ್ನಾಡುತ್ತಾರೆ ಸುಮ್ಮನೆ "ಹರಿ – ಹರಿ" ಎಂದರೇನಾಯಿತು ? ಎಂದವರನ್ನು ಉದ್ದೇಶಿಸಿ " ಅಣಕದಿಂದಾಗಲಿ – ಡಂಬದಿಂದಾಗಲೀ – ಎಡಹಿದಡಾಗಲೀ – ಬಿದ್ದಡಾಗಲೀ – ತಾಗಿದಡಾಗಲೀ– ತಾಕಲಿಲ್ಲಾದಡಾಗಲೀ–ಮರೆದು – ಮತ್ತೊಮ್ಮೆ ಹರಿ–ಹರಿ ಎಂದವರಿಗೆ ನರಕ ಭಯವೇಕೆ ? ಯಮಪಟ್ಟಣ ಕಟ್ಟಿದರೇನು?– ಯಮಪಟ್ಟಣ ಬಯಲಾದರೇನು ? ಹರಿದಾಸರಿಗೆ ? ಪುರಂದರವಿಠಲ" ಎಂದು ನಾರದ ರೂಪದಲ್ಲಿ "ನಾರಾಯಣ" ಎಂದು ಗಟ್ಟಿಯಾಗಿ ಚೀರಿ ನರಕದಲ್ಲಿದ್ದವರೆಲ್ಲರನ್ನೂ ಉದ್ಧರ ಮಾಡಿ ನರಕ ಬರಿದಾಗಿ ಮಾಡಿದ ಖ್ಯಾತಿಯ ಈ ನಮ್ಮ ದಾಸರು ಗರ್ಜಿಸಿ ನಡೆಯುತ್ತಾರೆ.

ಸಾಗುತ್ತಾ–ಸಾಗುತ್ತಾ–ನೂತನ ಗೃಹಪ್ರವೇಶ ಸಮಾರಂಭದಲ್ಲಿ ನಿರತನಾಗಿ ಯಾರ ಬರವನ್ನೂ ಗಮನಿಸದ ಗೃಹಸ್ಥನೊಬ್ಬನನ್ನು ಕಂಡ ದಾಸರು "ಈ ಲೋಕದಲ್ಲಿ – ಮನೆಯಿಂದ ಸಂತೋಷ ಕೆಲವರಿಗೆ – ಧನದಿಂದ ಸಂತೋಷ ಕೆಲವರಿಗೆ – ಸತಿಯಿಂದ ಸಂತೋಷ ಕೆಲವರಿಗೆ – ರತಿಯಿಂದ ಸಂತೋಷ ಕೆಲವರಿಗೆ – ಈ ಸಂತೋಷ ಅವರವರಿಗಿರಲಿ – ನನಗೆ ನಿನ್ನ ರತಿಯಲಿ ಸಂತೋಷವೋ ಪುರಂದರ ವಿಠಲ" ಎಂದು ಹೇಳಿ ಸಾಗುತ್ತಾರೆ. ದಾಸರನ್ನು ಅಷ್ಟರಲ್ಲಿಯೇ ನಿಲ್ಲಿಸಿ " ಅಲ್ಲಿ ಕಾಣಿಸುವವರು ದೊಡ್ಡ ಧಣಿಗಳು, ಏನನ್ನಾದರೂ ನೀವು ಬೇಡಿ ಪಡೆಯಬಾರದೆ" ಎಂದು ಸಲಹೆ ಕೊಟ್ಟಾತನೊಬ್ಬನಿಗೆ ತಮ್ಮ "ಸ್ವಾಮಿ" ಯೊಬ್ಬನೇ"ಧಣಿ" ಯೆಂದು ಹೇಳಿ ಪುರಂದರವಿಠಲ–ದೇವಾ "ನಿನ್ನನೇ ಪಾಡುವೆ – ನಿನ್ನನೇ ಪೊಗಳುವೆ ನಿನ್ನನೇ ಬೇಡಿ ಬೇಸರಿಸುವೆ ನಿನ್ನಂತೆ ಸಾಕಬಲ್ಲವರು ಇನ್ನುಂಟೆ ಎನ್ನ ಪುರಂದರ ವಿಠಲ–ದೇವರ ದೇವಾ" ಎಂದು ಹಾಡುತ್ತಲೇ ಮುಂದೆ ಸಾಗುತ್ತಾರೆ.

ದಾರಿಯಲ್ಲಿ ನಾಯಿಯೊಂದು ಕುಂಯ್‌ಗುಡುತ್ತ ಅಡ್ಡ ಬರುತ್ತದೆ. ಸುತ್ತಲೂ ಆಡುವ ಮಕ್ಕಳೂ, ಇತರರೂ ಇರುತ್ತಾರೆ. ದಾಸರು ನಾಯಿಯತ್ತ ಬಗ್ಗಿ " ಡೊಂಕು ಬಾಲದ ನಾಯಕರೇ ನೀವೇನೂಟವ ಮಾಡಿದಿರಿ " ಎಂದು ಹಾಡಿ ನಗೆಯ ಬುಗ್ಗೆಯನ್ನೇ ಸುತ್ತಲಿದ್ದವರಲ್ಲಿ ಹರಿಸುತ್ತಾರೆ. ಹಾಗೇ – "ಪುರಂದರ ವಿಠಲನ್ನ ಮರೆತು ತಿರುಗು" ವವರೆಲ್ಲ " ನಿನ್ನ" ಎಂದರೆ ನಾಯಿಯ ಸಮಾನರಷ್ಟೇ ? ಎಂದು ಸೂಚ್ಯವಾಗಿ ಹೇಳಿ ನೆರೆದಿರುವವರನ್ನು ಎಚ್ಚರಿಸುತ್ತಾರೆ.

"ವೈದಿಕ ಗಂಡ" ತನಗೆ ಸಿಕ್ಕಿಬಿಟ್ಟನಲ್ಲ ಎಂದು ಗೆಳತಿಯೊಡನೆ ಹೇಳಿ ಹೇಳಿ ಗೋಳಿಡುತ್ತಿರುವವಳ ಸಂಕಟವನ್ನರಿತು ತಾವೇ ಅವಳ ಅನುಭವ ಹಾಡಿ ತೋರಿಸುತ್ತಾರೆ. "ಮುನ್ನಿನ ಜನ್ಮದಲ್ಲಿ ಪುರಂದರ ವಿಠಲನ್ನ ಚೆನ್ನಾಗಿ ಪೂಜೆ ಮಾಡಲಿಲ್ಲದಿದ್ದುದರ ಫಲವಿದೆ"ಂದು ಹೇಳಿ, ಈಗಲಾದರೂ ಸತ್ಕಾರ್ಯ ಮಾಡಿ ದೇವರನ್ನು ಪೂಜೆ ಮಾಡಿರೆಂದು ಜನರಿಗೆ ತಿಳಿಸುತ್ತಾರೆ

ಮುಂದಿನ ಮನೆಯಲ್ಲಿನ ದಂಪತಿಗಳ ಕಥೆ ದಾಸರಿಗೆ ಗೊತ್ತು. ಗಂಡನೋ ಮುದುಕ; ಹೆಂಡತಿ ಚಿಕ್ಕವಳು. ಆ ಹೆಂಡತಿಯ ಮನೋಭಾವವನ್ನು ದಾಸರು ಹಾಡಿ ತೋರಿಸುತ್ತಾರೆ. ಅಂಥಹ ಹೆಂಡತಿ "ಬೇಗಾಗುವಸ್ತ್ರದಲ್ಲಿ ನೀರು ಕಾಸಿಡಬೇಕು, ಎಲೆಯಡಿಕೆ ಕುಟ್ಟಿಡಬೇಕು, ಬಿದಿರು ಕೋಲು ಮುಂದೆ ತಂದಿಡಬೇಕು, ಪಿತ್ತ – ಓಕರಿಕೆಯನ್ನು ಸಹಿಸಬೇಕು, ಸುರಿಸುವ ಜೊಲ್ಲನ್ನು ಎತ್ತಿ ಹೊರ ಸುರಿಯಬೇಕು, ಮೆತ್ತಗೆ ಮುದ್ದೆ ಮಾಡಿ ಉಣಬಡಿಸಬೇಕು – ಕಿವುಡಿನ ದೆಸೆಯಿಂದ ಕೂಗಿ ಕೂಗಿ ಕರೆದು, ಝಾಡಿಸಿ ಹಾಸಿ ಕೊಟ್ಟು, "ಅತನು ಮಲಗಿದ ಮೇಲೆ" ಬಾಡಿ ಬಳಲಿ ಅಳುತ್ತ "ಪುರಂದರ ವಿಠಲನ್ನ ನೆನೆಯುತ್ತ ಮೂಲೆಯೊಂದರಲ್ಲಿ ಒರಗ ಬೇಕು," ಎಂದು ಹಾಡಿ, ಇಂತಹ ದಾಂಪತ್ಯ ಸಲ್ಲದೆಂದು, ಮುದುಕರಿಗೂ–ಅವರಿಗೆ ಹೆಣ್ಣು ಕೊಡಲು ಬರುವವರಿಗೂ ಸೂಚಿಸಿ ನಡೆಯುತ್ತಾರೆ.

ತನ್ನ ನೂಲುವ ಕೆಲಸವನ್ನೇ ಮರೆತು ಹರಟೆಯಲ್ಲಿ ತೊಡಗಿದಾಕೆಗೆ "ಮಂದಿಯ ಗೊಡವೆ ಇನ್ನೇನು ಮಗಳೇ ! ಮುಂದೆ ನೋಡಿ ಹಂಜಿ ನೂಲವ್ವ–ಕಣ್ಣಿನ ಮುಂದಿನ ಕಸವನು ತೆಗೆದು ಸಣ್ಣಗೆ ನೀ ನೂಲವ್ವ" ಎಂದು ಹಾಡಿ ಪರರ ಗೊಡವೆ ಸಲ್ಲದೆಂದು ನಡೆಯುತ್ತಾರೆ.

ಹಿಂದಿನ ದಿನದ ಹರಿಕಥೆಯನ್ನು ಕೇಳಲು ಹೋಗಿದ್ದ ಸಂದರ್ಭದಲ್ಲಿ ತಾನು ಪಾಪೋಸು ಕಳೆದು ಕೊಂಡೆನೆಂದು–ಒಬ್ಬಾತ ತನ್ನ ಸ್ನೇಹಿತನಿಗೆ ಹೇಳುತ್ತಿರುವುದನ್ನು ದಾಸರು ಗಮನಿಸುತ್ತಾರೆ. ಶ್ರೀ ಹರಿಕಥಾ ಶ್ರವಣ, ಶ್ರೀ ಹರಿ ದರ್ಶನ ಶ್ರೀ ಹರಿಧ್ಯಾನಗಳಲ್ಲಿನ ಸಮಯದಲ್ಲಿ, ಅನನ್ಯ ಮ ನ ಸ್ಸಿ ರ ಬೇ ಕು. ಆಗ ಹೋ ಗು ವು ದು "ಪಾಪೋಸು" ಎಂದರೆ "ಅಪಾರ ಜನ್ಮದಿ ಅರ್ಜನೆ ಮಾಡಿದ" ಅಷ್ಟೂ ಪಾಪಗಳಲ್ಲದೆ ಬೇರೆಯಲ್ಲ. ಆ ಅಷ್ಟೂ ಪಾಪಗಳೂ "ಪರಮ ಪಾಪಿಷ್ಟರ ಪಾಲು ವಿಠಲನ ದಯದಿಂದಲೇ ಆಗುತ್ತದೆ, ಎಂದು "ಪಾಪೋಸು ಹೋದುವಲ್ಲ–ಸ್ವಾಮಿ ಎನ್ನ ಪಾಪೋಸು ಹೋದುವಲ್ಲ ಅಪಾರ ಜನುಮದಿ ಅರ್ಜನೆಯ ಮಾಡಿದ" "ಮಾಯಾರಮಣ ನಮ್ಮ ಪುರಂದರ ವಿಠಲನ ಮಾ ಯೆ ಯಿ ಂ ದ ಮಟ್ಟ ಮಾಯವಾದುವು ಈಗ" ಎಂದು ಹಾಡಿ, ಚಿಂತೆ ಬೇಡವೆಂದು ತಿಳಿಸಿ ನಡೆಯುತ್ತಾರೆ.

ಮುಂದಿನ ಮನೆಯೊಂದರಲ್ಲಿ, ಗೃಹಿಣಿಯೊಬ್ಬಳು ದಾಸರು ಬರುತ್ತಿರುವುದನ್ನು ದೂರದಿಂದಲೇ ಗಮನಿಸಿ–ಅವರು ಇನ್ನೆಲ್ಲಿ ಒಳಗೆ ಬಂದು ಬಿಡುವರೋ, ಇನ್ನೆಲ್ಲಿ ಭಿಕ್ಷೆ ಹಾಕಬೇಕಾದೀತೋ ಎಂದು ಶಂಕಿಸಿ ಬಾಗಿಲನ್ನು ದಢಾರನೆ ಹಾಕಿ, ಒಳಗೆ ನಿಲ್ಲುತ್ತಾಳೆ. ದಾಸರು ಹೊರಟ ನಂತರ ಮತ್ತೆ ಬಾಗಿಲನ್ನು ತೆರೆದು ಬೀದಿಗೆ ಬರಲು, ದಾಸರು ಎಲ್ಲವನ್ನೂ ಗಮನಿಸುವರೇ–ಎಲ್ಲರನ್ನೂ ಎಚ್ಚರಿಸುವರೇ. ಆದರಲ್ಲಿಯೂ ಪಾಪಿಗಳ ಉದ್ಧಾರವೇ ಅವರ–ನಾರದಾಂಶರಾದ ಅವರ–ಗುರಿಯೆಂದು ಕಾಣುತ್ತದೆ. ಏಕೆಂದರೆ ಆ ಮನೆಯ ಮುಂದೆಯೆ ದಾಸರು ನಿಲ್ಲುತ್ತಾರೆ. "ಕದವ ಮುಚ್ಚಿದಳಿದಕೋ ಗಯ್ಯಾಳಿ ಮೂಳಿ–ಕದವ ನಿಕ್ಕಿದಳಿದಕೋ–ಚಿಲಕ ಇನ್ನೂ ಕಲ್ಲಾಡುತಿದೆ ಒಳಗಿದ ಪಾಪವು



ಹೊರಗೆ ಹೋದೀತೆಂದು–ಭಾರತ ರಾಮಾಯಣ ಪಂಚರಾತ್ರಾಗಮಸಾರದ ತತ್ತ್ವ ಕಿವಿಗೆ ಬಿದ್ದೀತೆಂದು–ಮಂಗಳ ಮೂರುತಿ ಪುರಂದರ ವಿಠಲನ ತುಂಗವಿಕ್ರಮ ಪಾದ ಅಂಗಳ ಪೊಕ್ಕೀತೆಂದು" ಕದವ ಮುಚ್ಚಿದಳು ಎಂದು ಹಾಡಿ ಹರಿದಾಸರು ಭಕ್ತರು ಅವರು ಬೇಡುವದಕ್ಕಷ್ಟೇ ಅಲ್ಲ–ಪರಮಾತ್ಮನ ಕರುಣಾ ಪ್ರಸಾದ ಹಂಚುವುದಕ್ಕೂ ಬರುವಂತಹವರು, ಅವರನ್ನ ಬರಗೊಡದಿರುವುದು ಉಚಿತವಲ್ಲ.–"ಕೊಟ್ಟವನು ಸರಿಯೇ ಕೊಡದೆ ಬಿಟ್ಟವನೂ ಸರಿಯೇ. ಇಕ್ಕಿದವಗುಂಟು–ದುರ್ಮತಿ ಸೊಕ್ಕಿ ನಡೆದವಗೇನುಂಟು–ಪುಟ್ಟಿಸಿದ ಹರಿಯು–ನಮಗೆ ಹೊಟ್ಟೆಗೆ ಕೊಡದಿಹನೇ–ದಿಟ್ಟನಾಗಿ ನಮ್ಮ ಪುರಂದರ ವಿಠಲನು ಗಟ್ಟಿಯಾಗಿ ನಂಬಿದ ದಾಸರಿಗೆ" ಎಂದು ಭಕ್ತರನ್ನು ಹೊರಗಿಟ್ಟವರಿಗೆ ಅಲಾಭವೇ ಹೊರುತ್ತ–ದಾಸರ ಹೊಟ್ಟೆ ಬಟ್ಟೆಯ ಬಗೆಗೆ ಯಾರಿಗೂ ಚಿಂತೆ ಸಲ್ಲದೆಂದು ತೋರಿಸಿ ನಡೆಯುತ್ತಾರೆ.

ಕೆಲವು ಮನೆಗಳಾಚೆಗಿನ ಮನೆಯೊಂದರಲ್ಲಿ ಭಿಕ್ಷೆ ನೀಡಲು ಇರುವುದು "ರಾಗಿ" ಯಷ್ಟೇ ಎಂದು ಸಂಕೋಚದಿಂದ ಅದನ್ನು ತಂದು ನೀಡಲು ನಾಚುತ್ತಿರುವ ಸದ್ಭಕ್ತೆಗೆ ರಾಗಿಯು ಅಂಥ ಕಳಪೆಯಲ್ಲವೆಂದೂ ಅದು ಉತ್ತಮ ಪುಷ್ಟಿದಾಯಕ ಪಾಪ–ಮುಕ್ತವಾದ ಬೆಳೆಯಲ್ಲಿ ಬಡವರಿಗೊದಗುವ ಆಹಾರವೆಂದೂ ತಿಳಿಸುತ್ತಾರೆ. "ರಾಗಿ" ಪದವನ್ನೇ ಚಮತ್ಕಾರ ರೀತಿಯಲ್ಲಿ ಉಪಯೋಗಿಸಿ ರಾಗಿ ನೀಡಿದವರನ್ನು. "ಯೋಗ್ಯರಾಗಿ–ಭೋಗ್ಯರಾಗಿ–ಭಾಗ್ಯವಂತರಾಗಿ ನೀವು" ಎಂದೆಲ್ಲ ಮನಃಪೂರ್ತಿಯಾಗಿ ಹರಸಿ ಮುನ್ನಡೆಯುತ್ತಾರೆ.

ಮನೆಯೊಂದರಿಂದ ಶ್ರೀ ವಾಯುಸ್ತುತಿಯ ಪಾರಾಯಣ ಕಿವಿಗೆ ಬೀಳುತ್ತದೆ. ದಾಸರು, "ಒಬ್ಬ ಆಚಾರ್ಯನು ದೈವವೇ ಇಲ್ಲವೆಂಬ–ಒಬ್ಬ ಆಚಾರ್ಯನು ದೈವಕೆ ಎಂಟು ಗುಣವೆಂಬ–ಒಬ್ಬ ಆಚಾರ್ಯನು ನಿರ್ಗುಣ–ನಿರಾಕಾರ–ನಿರೂಹನೆಂದು ತಾನೆ ದೈವವೆಂಬ–ಇವರೊಬ್ಬರೂ ವೇದಾರ್ಥವರಿತೂ ಅರಿಯರು–ಇವರೊಬ್ಬರೂ ಶಾಸ್ತ್ರಾರ್ಥವಂತೂ ಅರಿಯರು. ಒಬ್ಬ ಮಧ್ವಾಚಾರ್ಯರೇ ಪುರಂದರ ವಿಠಲನೊಬ್ಬನೆ ಎಂದು ತೋರಿಕೊಟ್ಟವರಾಗಿ "ಹರಿ ಹರ ಸಿರಿ ಮಧ್ವಾಚಾರ್ಯರೇ ಗುರುಗಳು ತ್ರೈಲೋಕ್ಯಕೆ ಪುರಂದರ ವಿಠಲನೆ ದೈವವು" "ಸಿರಿ ಪುರಂದರ ವಿಠಲನ ತೋರಿಸಿದ ಸಿರಿ ಮಧ್ವಾಚಾರ್ಯರಿರುತಿರೆ ಇತರರು ಗುರುಗಳಾದರು (ಗುರುಗಳಾಗಿಬಿಟ್ಟೆವೆಂದು ಕೊಂಡರು) ನೋಡಾ" "ಸಿರಿ ಪುರಂದರ ವಿಠಲನಾಳು ಮಧ್ವಮುನಿ ದಾಸೋಹಂ" ಎಂಬ "ವೈದಿಕ ವೈಷ್ಣವ ಒಂದೇ ಎಂದು ಮಧ್ವಮುನಿಪ್ರತಿಪಾದಿಸಿ, ಪುರಂದರವಿಠಲ ಮೆಚ್ಚಿ"— "ಪುರಂದರ ವಿಠಲನೆ ದೈವಾಧಿದೈವ–ಸುರಗುರು, ಮಧ್ವಾಚಾರ್ಯರೆ ಚಕ್ರವರ್ತಿ"— "ಶರಣು ಸಿರಿ ಮಧ್ವಾಚಾರ್ಯರಿಗೆ – ಪುರಂದರ ವಿಠಲಗೆ – ಶರಣು ನಾನೆಂಬೆನನವರತ" ಎಂದು ಭಕ್ತಿಪರವಶತೆಯಿಂದ ಆ ಮನೆಯಮುಂದೆ ನಿಂದು ಹಾಡುತ್ತಾರೆ. ಕಣದಲ್ಲಿ ನೆರೆದ ಜನಸಂದಣಿ ತಲೆದೂಗಿ–ಹರ್ಷ ಸೂಚಿಸುತ್ತದೆ. ದಾಸರು ಸಂತಸಭರಿತರಾಗಿ ಮುಂದೆ ಸಾಗುತ್ತಾರೆ.

ಮರುದಿನದ ಅಡಿಗೆಗೆಂದು ಕಾಯಿಪಲ್ಲೆ ನೋಡಿ ಹಾಡುತ್ತಾರೆ. ಪುರಂದರ ವಿಠಲ "ನಿನ್ನಂಘ್ರಿ ಭಜಿಸದವರ ಬಾಳ್ವೆಕಾಯಿ – ಎನ್ನ ಸತಿಸುತರು ನಿನ್ನವರೆಕಾಯಿ–ಕರೆ ಕರೆ ಸಂಸಾರ ಕಡಲಿಯ ಕಾಯಿ" ಎಂದು ಹಾಡಿ ನಗಿಸಿ–ನಲಿಸಿ ಮುನ್ನಡೆಯುತ್ತಾರೆ. ಮುಂದೆ ಮನೆಯಾಕೆಯೊಬ್ಬಳನ್ನು–ಹೊಸದಾಗಿ ಮನೆಗೆ ಬಂದ ಸೊಸೆಯಂತೆ ಕಾಣುವ ಹುಡುಗಿಯನ್ನು ಕಂಡು "ಊಟಕ್ಕೆ ಬಂದೆವು ನಾವು ನಿನ್ನ ಆಟ–ಪಾಟವ ಬಿಟ್ಟು ಅಡುಗೆ ಮಾಡಮ್ಮಾ ಹೊನ್ನ ರಾಶಿಗಳನು ಸುರಿಯೆ ಕೋಟಿ ಕನ್ನೆ–ಧರಿತ್ರಿಯ ಧಾರೆಯನೆರೆಯೆ ಅನ್ನದಾನಕ್ಕೆ ಇದು

ಸಖಿಯೆ – ನಮ್ಮ ಚೆನ್ನ ಪುರಂದರ ವಿಠಲನೊಳ್ ಬೆರೆಯೆ" ಎಂದು ಹೇಳಿ ಎಚ್ಚರಿಸಿ, ಹಸಿದು ಬರುವವರನ್ನು ಕರೆದು ಅಡಿಗೆಮಾಡಿ ಬಡಿಸಿ, ವಿಚಾರಿಸಿಕೊಂಡು ಪುಣ್ಯ ಕಟ್ಟಿಕೊಳ್ಳಹೇಳುತ್ತಾರೆ.

ದಾರಿಯಲ್ಲಿ ಊರಿನ ಮುಖ್ಯಸ್ಥರ ಗುಂಪೊಂದು ದಾಸರನ್ನೇ ಹುಡುಕಿಕೊಂಡು ಬಂದು ಕಾಣುತ್ತದೆ. ಗುಂಪಿನವರೆನ್ನುತ್ತಿದ್ದಾರೆ. "ಸ್ವಾಮಿ ಗುರುಗಳೇ–ಒಡೆಯರೇ–ತಾವು ಹೇಳಿದಂತೆ ಈ ವರ್ಷ ಊರ ದೇವರನ್ನು ಯಾವ ಪ್ರಾಣಿಬಲಿಯೂ ಇಲ್ಲದಂತೆ ಮಾಡಲಿದ್ದೇವೆ. ತಾವೆಂದುದು ಸತ್ಯ. ನಮ್ಮೊಳಗಿರುವ ಮದ– ಮತ್ಸರ – ಕಾಮ – ಕ್ರೋಧಗಳೇ ದುಷ್ಟಪ್ರಾಣಿಗಳು – ನಮ್ಮನ್ನು ಕೊನೆಯಲ್ಲಿ ನಾಶ ಮಾಡುವಂತಹುವು. ಅದೇ ಬಲಿಯಾಗಬೇಕಾದವೇ ಹೊರತು ನಿಜವಾದ ಕುರಿ, ಕೋಳಿ, ಕೋಣಗಳಲ್ಲ. ನಮಗೆ ಬುದ್ಧಿ ಬಂದಿದೆ ಈ ಸಾರಿ "ದೇವರು ಮಾಡುವ ದಿನ ತಾವು ಬಂದು ನಮ್ಮನ್ನು ಹರಸಬೇಕು" ಎಂದು ಹೇಳುತ್ತಾ ಕಾಲಿಗೆರಗುತ್ತಾರೆ. ಅವರನ್ನೆಬ್ಬಿಸಿ, ದಾಸರು ಸಂತಸದಿಂದ ಹಾಗೇ ಆಗಲೆಂದು ಹೇಳಿ ಹೊರಡುತ್ತಾರೆ.

ದಾಸರ ಬರವನ್ನು ದೂರದಿಂದಲೇ ಕಂಡವರೊಬ್ಬರು ತಟ್ಟೆಯಲ್ಲಿ ಹಣ್ಣು – ಹಂಪಲ, ದಕ್ಷಿಣ ತಾಂಬೂಲ ಮತ್ತು ಪಾತ್ರೆಯಲ್ಲಿ ಧಾನ್ಯ–ಬಟ್ಟೆಬರೆಗಳನ್ನು ತಂದು ದಾಸರ ಮನೆಯ ಮುಂದೆ ಬಂದೊಡನೆಯೇ ಇಟ್ಟು ನಮಸ್ಕಾರ ಮಾಡುತ್ತಾರೆ. "ಸ್ವಾಮಿ ಕಳೆದ ವರ್ಷ ನಮ್ಮ ಮನೆಯಲ್ಲಿ ಮದುವೆಯ ಸಮಾರಂಭವಿದ್ದಿತು. ಮನೆಗೆ ಬಂದವರಲ್ಲಿ ಅನೇಕ ತತ್ತ್ವವೇತ್ತರು ಇದ್ದರು. ತಾವು "ಜಯವದೆ–ಜಯವದೆ ಈ ಮನೆತನಕೆ" ಎಂದು ಹಾಡಿದಾಗ ನಾವು ಬುಡುಬುಡಿಕೆಯುದು ಎಂತಹುದೋ ಹಾಡೆಂದಿದ್ದೆವು. ಅದರ ಅರ್ಥವು ಬಲು ಗೂಢವಿದ್ದು–ಮಹಾ ತತ್ತ್ವಾರ್ಥವಿದೆಯೆಂದು, ಬಂದಿದ್ದವರು ಹೇಳಿ ವಿವರಿಸಿ ಸಂತಸಪಟ್ಟರು. ತಾವು ನುಡಿದುದು ನಮಗೂ ಆಶೀರ್ವಾದವಾಗಿ, ನಿಜವಾಗಿಯೂ ಅಂದಿನಿಂದ ನಮಗೆ ಜಯದ ಮೇಲೆ ಶುಭವಾಗುತ್ತದೆ ನಡೆದಿದೆ. ಈ ವಸ್ತುಗಳನ್ನು ತಾವು ಸ್ವೀಕರಿಸಿದರೆ–ದೇವರೇ ಅದನ್ನು ತೆಗೆದುಕೊಂಡಂತಾಗುವುದು ಎನ್ನುತ್ತಾರೆ. ದಾಸರು ನಕ್ಕು ಸ್ವಲ್ಪ ಹಣ್ಣು – ಧಾನ್ಯವನ್ನಷ್ಟೇ ತೆಗೆದುಕೊಂಡು – ಅಂದಿನ ದಕ್ಷಿಣೆಗೆ ಬೇಕಾದ ನಾಣ್ಯವಷ್ಟನ್ನೇ ಜೋಳಿಗೆಯಲ್ಲಿ ಹಾಕಿಕೊಂಡು, ಮಿಕ್ಕುದನ್ನು ಅಲ್ಲಿದ್ದ ಮುದುಕರು–ಮಕ್ಕಳಿಗೆ ಹಂಚಿ ನಡೆಯುತ್ತಾರೆ.

ದಾಸರಿಗೆ ಹರಿಕೀರ್ತಿಯನ್ನು ಹಾಡುತ್ತಾ – ಜನರನ್ನು ಎಚ್ಚರಿಸುತ್ತ ನಡೆಯುವುದರಲ್ಲಿ ಆಸಕ್ತಿಯೇ ಹೊರತು, ಜೋಳಿಗೆ ತುಂಬುವುದರ ಮೇಲೆ ಇಲ್ಲವೇ ಇಲ್ಲ. ಊರಿನ ತುದಿ ಸಮೀಪಿಸಿ ವೇಳೆಯೂ ಆಗಿರುವುದು ದಾಸರ ಗಮನಕ್ಕೆ ಆಗ ಬರುತ್ತದೆಯೇನೋ, ಜೋಳಿಗೆಯೂ ಆಗ ಸ್ವಲ್ಪ ಭಾರಹತ್ತುತ್ತಿರುವುದೋ ಏನೋ. ದಾಸರು ಮಕ್ಕಳೊಡನೆ ಹಿಂದಿರುಗಿ ಮನೆಗೆ ನಡೆಯುತ್ತಾರೆ.

ದಾಸರ ಮನೆಯಲ್ಲಿ ಬಾಗಿಲ ಬಳಿಯಲ್ಲಿಯೇ ಅವರ ಸಹಧರ್ಮಿಣಿ ಕಾದಿರುತ್ತಾರೆ. ದಾಸರು ಬಂದೊಡನೆ ಜೋಳಿಗೆಯನ್ನು ಅವರ ಕೈಯಿಂದ ಕೊಂಡು ಕೆಳಗಿಳಿಸುತ್ತಾರೆ. ತಂಬೂರಿ–ತಾಳ–ದಂಡಿಗೆಗಳನ್ನೂ ಅವರಿಂದ ತೆಗೆದುಕೊಂಡು ಅವುಗಳ ಸ್ಥಾನದಲ್ಲಿರಿಸುತ್ತಾರೆ. ಗಂಡ– ಮಕ್ಕಳಿಗೆ ಕೈಕಾಲು ತೊಳೆಯಲು ನೀರನ್ನು ಕೊಟ್ಟು, ಸ್ವಲ್ಪ ವಿಶ್ರಮಿಸಿಕೊಳ್ಳ ಹೇಳಿ ಚಾಪೆಯನ್ನು ಹಾಸಿ ಜೋಳಿಗೆಯೊಡನೆ ಅಡಿಗೆ ಮನೆಗೆ ನಡೆಯುತ್ತಾರೆ. ದಾಸರು ಒಳಗೆ ಬಂದು, ಮನೆಯ ಹಜಾರದಲ್ಲಿ ನಾಲ್ಕಾರು ಅಗಂತುಕರನ್ನು ಕಂಡು ನಮಸ್ಕರಿಸಿ ಪರಿಚಯ ವಿಚಾರಿಸಿ, ಉಪಚರಿಸಿ, ತಮ್ಮಲ್ಲಿಯೇ ಭೋಜನವಾಗಲೆಂದು ಅವರನ್ನು ಒತ್ತಾಯಮಾಡಿ ಒಪ್ಪಿಸಿ ಅಥಿತಿಗಳೊಡನೆ ಮಾತನಾಡುತ್ತ ಕುಳಿತಿದ್ದು ಸ್ವಲ್ಪ ವೇಳೆಯನಂತರ ಸ್ನಾನಕ್ಕೆ ನಡೆಯುತ್ತಾರೆ.

ಅತ್ತ ದಾಸರ ಪತ್ನಿ ಮಡಿಯುಟ್ಟು ಬಂದು ಅಡಿಗೆಗೆ ಹೊರಡುತ್ತಾರೆ. ದಾಸರ ಪೂಜೆಗೂ ಜೊತೆಯಲ್ಲಿಯೇ ಬೇಕಾದ ಸಿದ್ಧತೆ ಮಾಡುತ್ತಿರುತ್ತಾರೆ. ದಾಸರು ಸ್ನಾನ ಮುಗಿಸಿಬಂದು, ತಮ್ಮ ಆಹ್ನಿಕದಲ್ಲಿ ತೊಡಗಿ, ಅದನ್ನು ಮುಗಿಸುತ್ತಾರೆ. ಬಂದವರಿಗೆ ಸ್ನಾನ – ಆಹ್ನಿಕಗಳಿಗೆ ಅಣಿಮಾಡಿಕೊಡುವಂತೆ, ಮಕ್ಕಳಿಗೆ ಸೂಚಿಸಿ–ಅವರನ್ನು ಸ್ನಾನಾನಂತರ ದೇವತಾರ್ಚನೆಗೆ ಆಹ್ವಾನಿಸಿರೆನ್ನುತ್ತಾರೆ. ಅತಿಥಿಗಳು ಸ್ನಾನಕ್ಕೆ ತುಂಗಭದ್ರೆಯೇ ಸರಿಯೆಂದು ಹೇಳಿ ದಾಸರು ತಮ್ಮನ್ನು ವಿಶೇಷವಾಗಿ ಗಮನಿಸಿ ತೊಂದರೆಪಡಬಾರದೆಂದು ಹೇಳಿ ಸ್ನಾನಕ್ಕೆ ನಡೆಯುತ್ತಾರೆ.

ದಾಸರು ದೇವತಾರ್ಚನೆಯನ್ನು ನಡೆಸುತ್ತಾರೆ. ಮಹಾಮಹಿಮನಾದ – ಪರಮಾತ್ಮನಿಗೆ ಸದಾ – ಸರ್ವದಾ ಪ್ರಿಯರಾದ, ನಾರದರ ಅಂಶವವರಾದ ಅವರ ಪೂಜಾಕ್ರಮವನ್ನು ವರ್ಣಿಸಲು ಯಾರಿಗೆ ಸಾಧ್ಯ ? ಅವರ ಪೂಜಾಕ್ರಮವೇನು – ಅವರ ಅನುಸಂಧಾನವೇನು? ಅವರ ಸುಂದರ ವಿಧಿಯೇನು ಅವರು ಮಂತ್ರೋಚ್ಚಾರಣೆಯೇ ಗಂಧರ್ವ ಗಾನಕ್ಕೆ ಮಿಗಿಲಿನ ಇಂಪಿನದು. ಅವರಂದುದೆಲ್ಲ ವೇದಾರ್ಥವೇ. ಅವರು ನಡೆಸಿದುದೇ ವಿಧಿ – ಬಿಟ್ಟುದುದೇ ನಿಷೇಧ. ಅವರ ಪೂಜಾತಂತ್ರದ ಪ್ರತಿಭಾಗವೂ, ಸ್ವಸಿದ್ಧಿ ಪಡೆದು ಶ್ರೀಹರಿಯಿಂದ ಸ್ವೀಕೃತವಾದಂತಹದು.

ಸರ್ವ ದೇವಮೂರ್ತಿಗಳನ್ನೂ ಶ್ರೀಹರಿಯಲ್ಲಿ ದಾಸರು ಚಿಂತಿಸಿ ಪೂಜಿಸುತ್ತಾರೆ. "ನಿನ್ನ ಬೊಮ್ಮ–ಮೂರುತಿಗೆ ನಮೋ–ನಿನ್ನ ರುದ್ರ ಮೂರುತಿಗೆ ನಮೋ–ನಿನ್ನ ಸ್ಥಾವರ ಮೂರುತಿಗೆ ನಮೋ – ನಿನ್ನ ಜಂಗಮ ಮೂರುತಿಗೆ ನಮೋ – ನಿನ್ನ ಶ್ರೀಮೂರ್ತಿಗೆ ನಮೋ ನಮೋ ಪುರಂದರ ವಿಠಲ" ಎಂದು ವಂದಿಸುತ್ತಾರೆ. ದೇವನಿಗೆ "ಬ್ರಹ್ಮಾಂಡವೇ ಮಂಟಪ ಜ್ಯೋತಿಶ್ಚಕ್ರವೇ ದೀಪ ಮಹಾಮೇರು ಸಿಂಹಾಸನ–ಮಂದಾಕಿನಿ ಮಜ್ಜನ ಮಹಾಲಕುಮಿ ಅಂಬರಾಭರಣ – ಮಂದಾರ – ಪಾರಿಜಾತ ಮಾಲೆ. ಮಹಾಮೇರು ಸಿಂಹಾಸನ ಪುರಂದರ ವಿಠಲಗೆ" ಎಂದು ಚಿಂತಿಸಿ ಸೋಪಚಾರ ಪೂಜೆ ಸಲಿಸುತ್ತಾರೆ. ಅನೇಕ ಬಗೆಯ ದಿವ್ಯ ಸ್ತೋತ್ರ ಪಠನವಾಗುತ್ತದೆ. ಮಕ್ಕಳೂ ದನಿಗೂಡಿಸುತ್ತಾರೆ.

ತಾರತಮ್ಯ ವಿಧಿಯನ್ನು ಅವರಂತೆ–ಅವರ ಗುರುಗಳನ್ನುಳಿದು–ಬೇರಾರು ಬಲ್ಲರು? ಹರಿ–ಸಿರಿ, ಮುಖ್ಯ ಪ್ರಾಣ, ಗರುಡ, ಶೇಷ, ಹೀಗೆ ಪೂಜಾ ಪ್ರಕರಣ ಮುನ್ನಡೆಯುತ್ತದೆ. ಸ್ಥೂಲ–ಸೂಕ್ಷ್ಮ, ತಾರತಮ್ಯ ಚಿಂತನೆಯಿಂದ ಅವರ ಪೂಜೆ ಸಾಗುವುದಾಗುತ್ತದೆ.

"ನಿತ್ಯಾನಿತ್ಯ ವಸ್ತುಗಳೊಳಗೆ ನಿತ್ಯತೃಪ್ತ ಪುರಂದರ ವಿಠಲ ಜಗನ್ನಾಯಕ ಪುರಂದರ ವಿಠಲ ಸರ್ವ ಜಗಕೆ ಪರಿಪೂರ್ಣ ನೀನೆಯೇ–ನನಗೆ ನೀನೇ ಮೋಹ–ನಿನಗೆ ನೀನೇ ಪ್ರೀತಿ–ನಿನಗೆ ನೀನೇಭಕ್ತ–ನಿನಗೆ ನೀನೇ ದ್ವೇಷಿ–ನಿನಗೆ ನೀನೇ ಜ್ಞಾನಿ–ನಿನಗೆ ನೀನೆ ಸಾಕ್ಷಿ ಪುರಂದರ ವಿಠಲ–ಶರಣಾಗತ ವಜ್ರ ಪಂಜರ ಸಿರಿ ಪುರಂದರ ವಿಠಲ–ನಿನಗೆ ನೀನೇ ನೀನೇ ನೀನೇ ಪುರಂದರ ವಿಠಲ–ನಿನ್ನ ಮಹಿಮೆಗಳ ನೀನೇ ಬಲ್ಲೆಯಲ್ಲದೆ ಅನ್ಯರು ಬಲ್ಲರೆ ಪುರಂದರ ವಿಠಲ–ಹೊಕ್ಕುಳಲಿ ಗಂಡು ಹೆತ್ತವರುಂಟೆ–ಉಂಗುಷ್ಠದಲಿ ಹೆಣ್ಣ ಹೆತ್ತವರುಂಟೆ–ಮಿಕ್ಕಾದ ದೇವರಿಗೆ ಈ ಸೌಭಾಗ್ಯವುಂಟೆ–ಮೊರಹೊಕ್ಕೆ–ಮೊರಹೊಕ್ಕೆ ಪುರಂದರ ವಿಠಲ–ಶ್ವೇತ ದ್ವೀಪದಲ್ಲಿ, ನಿಂತು–ಅನಂತಾಸದಲ್ಲಿ ಮಲಗಿ–ನಿತ್ಯ ವೈಕುಂಠಸ್ಥಾನ ಪುರಂದರ ವಿಠಲ–ನಿತ್ಯಾನಿತ್ಯ ವಸ್ತುಗಳೊಳಗೆ ನಿತ್ಯ ಸತ್ಯ ಪುರಂದರ ವಿಠಲ–ನಿನ್ನ ನಾಮದ ನೆನಹೇ ಸಕಲ ಸಂಪದ ಪುರಂದರ ವಿಠಲ–ರುಚಿಕರ ವರ ಕಲ್ಯಾಣರಂಗ ರುಕ್ಮಿಣೀ ರಮಣ ಪರಿಪೂರ್ಣ ನಮ್ಮ ಪುರಂದರ ವಿಠಲ–ಅರವಿಂದದಳನಯನ–ಶರಣೆಂದರವರ ಕಾಯುವ ಕರುಣಾಸಾಗರ ನಮ್ಮ ಪುರಂದರ ವಿಠಲ–ಪುರರದರ ವಿಠಲನೆಂದು ಕರೆವುದೇ ತಡೆ–ಕರೆದಲ್ಲಿಗೆ ಬರುವ" ಹೀಗೆಲ್ಲ ದಾಸರು ಹಾಡುತ್ತಾರೆ.

(29 ನೇ ಪುಟನೋಡಿ)

# ಪುರುಷೋತ್ತಮ

ಶ್ರೀ ಡಿ. ಕೃಷ್ಣಯ್ಯಂಗಾರ್

ಶ್ರೀಕೃಷ್ಣನನ್ನು ಪುರುಷೋತ್ತಮ ಎಂದು ಕರೆಯುವುದು ರೂಢಿಯಲ್ಲಿ ಬಂದಿದೆ. ಇದನ್ನು ಸಮರ್ಥಿಸುವುದಕ್ಕೆ ಭಗವದ್ಗೀತೆಯಲ್ಲಿ 'ಪುರುಷೋತ್ತಮಯೋಗ' ಎಂಬ ಭಾಗವಿದೆ. ಧರ್ಮರಾಜನು ರಾಜಸೂಯ ಯಾಗದ ಕೊನೆಯಲ್ಲಿ, ಅಗ್ರ ಪೂಜೆಯಾರಿಗೆ ಸಲ್ಲಿಸಬೇಕು ಎಂದು ಕೇಳಿದಾಗ, ಕುರುಕುಲ ಪಿತಾಮಹನಾದ ಭೀಷ್ಮನು "ಶ್ರೀಕೃಷ್ಣನು ಪುರುಷೋತ್ತಮ. ಅವನಿಗೇ ಸಲ್ಲಬೇಕು" ಎನ್ನುತ್ತಾನೆ. ಆಗ ಶಿಶುಪಾಲನು ಇದನ್ನು ಆಕ್ಷೇಪಿಸಿ, ಶ್ರೀಕೃಷ್ಣನಲ್ಲಿ ಶತಾಪರಾಧ ಮಾಡುವನು. ಈ ಅಪರಾಧ ಕ್ಷಾಳನಕ್ಕಾಗಿ ಶ್ರೀಕೃಷ್ಣನು ಶಿಶುಪಾಲನನ್ನು ಸಂಹಾರ ಮಾಡಿ, ತನ್ನ ಪುರುಷೋತ್ತಮತ್ವವನ್ನು ಸ್ಥಾಪಿಸುವನು. ಪುರುಷೋತ್ತಮನ ಜೀವನ ಆದರ್ಶಯುತವಾದುದು. ಸರ್ವಗುಣಯುಕ್ತವಾದುದು. ಸಕಲ ಜೀವರಾಶಿಗಳನ್ನು ಉದ್ಧಾರಮಾಡುವಂತಹುದು.

ಮಹತಸ್ತಮಸಃ ಪಾರೇ ಪೂರುಷಂ
ಹ್ಯತಿತೇಜಸಂ
ಜ್ಞಾತ್ವಾತಂ ಮೃತ್ಯುಮರ್ತೇತಿ ತಸ್ಮೈ
ಜ್ಞೇಯಾತ್ಮನೇ ನಮಃ

ಎಂದು ಮಹಾಭಾರತದ ಶಾಂತಿಪರ್ವದಲ್ಲಿ ಹೇಳಿರುವಂತೆ, ಪುರುಷೋತ್ತಮನ ಚರಿತ್ರೆ ಸರ್ವಾದರಣೀಯವಾಗಿದೆ. ಇಂತಹ ಚರಿತ್ರೆ ಇನ್ನಾವ ದೇಶದ ಕಾವ್ಯದಲ್ಲಿಯೂ ಇತಿಹಾಸದಲ್ಲಿಯೂ ಇಲ್ಲ.

ಪುರುಷೋತ್ತಮನ ವೃತ್ತಾಂತವು, ಮಹಾಭಾರತ, ಭಾಗವತ, ಹರಿವಂಶ, ವಿಷ್ಣುಪುರಾಣ–ಇತ್ಯಾದಿಗಳಲ್ಲಿ ನಿರೂಪಿತವಾಗಿದೆ, ಬ್ರಹ್ಮಾಂಡ ಪುರಾಣ, ವಾಯುಪುರಾಣ, ಸ್ಕಾಂಧಪುರಾಣ, ಕೂರ್ಮಪುರಾಣ–ಮುಂತಾದುವುಗಳಲ್ಲಿ ಅಲ್ಲಲ್ಲಿ ವಿವರಿಸಲ್ಪಟ್ಟಿದೆ. ಇವನು, ಪಾಂಡವರ ಸಖ, ಸಹಾಯಕ,



ಪರಮಾತ್ಮನ ಅವತಾರ ಎಂಬ ವಿಷಯವನ್ನು ದೃಢೀಕರಿಸುವುದಕ್ಕ ಮಹಾಭಾರತದಲ್ಲಿ ವಿಪುಲವಾದ ಆಧಾರಗಳಿವೆ. ಮಾನವನನ್ನು ಸಂಸಾರದಿಂದ ಬಿಡುಗಡೆ ಮಾಡುವುದಕ್ಕೆ ಪುರುಷೋತ್ತಮನ ಚರಿತ್ರೆ ಭವ್ಯವಾಗಿರುವುದಲ್ಲದೆ, ಮಾರ್ಗದರ್ಶಕವೂ ಆಗಿದೆ. ಇವನ ಅವತಾರ ಕಾರಾಗೃಹದಲ್ಲಿ. ಇದನ್ನು ಕಂಡು, ಅಲ್ಲಿದ್ದ ವಸುದೇವನು ಆಶ್ಚರ್ಯಪಡುತ್ತಾನೆ. ಆ ಸಂದರ್ಭವನ್ನು ಹೀಗೆ ವರ್ಣಿಸಲಾಗಿದೆ.

ತಮದ್ಭುತಂ ಬಾಲಕಮಂಬುಜೇಕ್ಷಣಂ
ಚತುರ್ಭುಜಂ ಶಂಖ
ಗದಾರ್ಯದಾಯುಧಂ।
ಶ್ರೀವತ್ಸಲಕ್ಷ್ಮಂ ಗಲಶೋಭಿ ಕೌಸ್ತುಭಂ
ಪೀತಾಂಬರಂ ಸಾಂದ್ರ ಪಯೋದ
ಸೌಭಗಂ ||
ಮಹಾರ್ಹ ವೈಡೂರ್ಯ ಕಿರೀಟಕುಂಡಲ
ತ್ವಿಷಾ ಪರಿಷ್ವಕ್ತ ಸಹಸ್ರಕುಂತಲಂ।
ಉದ್ದಾಮ ಕಾಂಚ್ಯಂಗದ ಕಂಕಣಾದಿಭಿರ್
ವಿರೋಚಮಾನಂ ವಸುದೇವ ಐಕ್ಷತ||

ಈ ಶ್ಲೋಕವು ಪುರುಷೋತ್ತಮನ ಅವತಾರದ ಮೂಲ ವೈಶಿಷ್ಟ್ಯವನ್ನು ಸೂಚಿಸುತ್ತದೆ. ಸೌಂದರ್ಯಪ್ರಧಾನವಾದ ಅವತಾರ ಇದು. 'ಸಂಸಾರಿ ಚಿತ್ತ ವಶೀಕರಣಾರ್ಥಂ ಸೌಂದರ್ಯಂ' ಎಂಬಂತೆ ಪರಮಾತ್ಮನ ಕಾರುಣ್ಯವೇ ಸೌಂದರ್ಯದ ಮೂಲ ಎಂಬುದು ಭಾಗವತ ಸಿದ್ಧಾಂತ. ಪ್ರಕೃತಿ ಸೌಂದರ್ಯವೂ ಕೂಡ ಪರಮಾತ್ಮನ ಸಂಕಲ್ಪದ ಸ್ವರೂಪ. ಬೃಂದಾವನದ ಲತಾದಿ ಸಮಸ್ತವೂ ಫಲಪುಷ್ಪ ಸಮೃದ್ಧಿಯಿಂದ ಕೂಡಿದ್ದರೆ, ಅದಕ್ಕೆ ಪುರುಷೋತ್ತಮನ ಸಂಕಲ್ಪವೇ ಕಾರಣ. ಪುರುಷೋತ್ತಮನು ಭುವನಸುಂದರ, ಅವನ ಸೌಂದರ್ಯ ಸಕಲ ಜೀವರಾಶಿಗಳ ಚಿತ್ತವನ್ನು ಆಕರ್ಷಿಸಿದೆ. ಗೋವುಗಳು, ಲೋಕಮೋಹಕ ವೇಣುನಾದವನ್ನು ಕೇಳಿ, ಹುಲ್ಲನ್ನು ಅರ್ಧ ಅರ್ಧ ಅಗಿದು. ಸ್ತಬ್ಧವಾಗಿ ನಿಂತು, ಕಿವಿಯಿಂದ ಗಾನಾಮೃತಪಾನ ಮಾಡುತ್ತವೆ. ಕರುಗಳು ಹಾಲನ್ನು ಅರ್ಧಕುಡಿದು, ಹಾಲು ಬಾಯಿಂದ ಸ್ರವಿಸುತ್ತಿರುವುದನ್ನೂ ಲಕ್ಷಿಸದೆ, ವೇಣುನಿಂದ ಬರುವ ಆ ನಾದದಲ್ಲಿ ಮುಳುಗಿರುತ್ತವೆ. ಹಾಗೆಯೇ ಪುರುಷೋತ್ತಮನ ಅದ್ಭುತವೇಣುನಾದದಿಂದ ಪಾಮರರು ಜ್ಞಾನಿಗಳಾಗುವರು. ಚೇತನಕ್ಕೆ ಅಚೇತನಧರ್ಮ, ಅಚೇತನಕ್ಕೆ ಚೇತನ ಸ್ಫೂರ್ತಿ ಉಂಟಾಗುವುದು. ಹೀಗೆ ಪುರುಷೋತ್ತಮನ ರೂಪ ರಸಾಯನ ಒಂದು ಬಗೆಯ ಕಲಾಸಿಂಧು, ಇವನ ಬಾಲಲೀಲೆಯಲ್ಲಿ ಸೌಂದರ್ಯದ ಅನುಭವಪ್ರವಾಹ ಪ್ರದರ್ಶಿತವಾಗಿದೆ.

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ | ಪ್ರಾ 7–30 | ಪ್ರಾ 8–00 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಅರ್ಚನೆ | ಪ್ರಾ 8–00 | ಪ್ರಾ 8–30 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಸರ್ವದರ್ಶನ | ಪ್ರಾ 9–00 | ಮ 12–30 |
| | ಮ 1–00 | ಸಂ 6–00 |
| | ರಾ 7–00 | ರಾ 8–45 |
| | ರಾ 9–00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ.

### ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

### ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35–00 |
| 2. | ದಧ್ಯೋದನ | ,, | 40–00 |
| 3. | ಪುಳಿಯೋಗರೆ | ,, | 50–00 |
| 4. | ಪೊಂಗಲಂ | ,, | 55–00 |
| 5. | ಸಕ್ಕರೆಪೊಂಗಲ್ | ,, | 65–00 |
| 6. | ಶಾಕರ ಭಾತ್ | ,, | 85–00 |
| 7. | ಕೇಸರೀ ಭಾತ್ | ,, | 90–00 |
| 8. | ಸೀರ | ,, | 155–00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

ಪುರುಷೋತ್ತಮನು ತನ್ನ ಬಾಲ್ಯವನ್ನು ಗೋಪಗೋಪಿಯರ ಮಧ್ಯೆ ಕಳೆಯುತ್ತಾನೆ, ನಂದ ಯಶೋದೆಯರನ್ನು ತಂದೆ ತಾಯಿಗಳನ್ನಾಗಿ ಭಾವಿಸಿ, ತನ್ನ ಹಿರಿಮೆಯನ್ನು ಮರೆಮಾಚಿ, ತನ್ನ ಸೌಂದರ್ಯ ಸೌಶೀಲಾದಿ ಮಹಾಗುಣಗಳನ್ನು ವ್ಯಕ್ತಪಡಿಸುತ್ತಾನೆ. ಚತುರ್ಮುಖನು ಇದನ್ನು ಕಂಡು ಗೋಪಗೋಪಿಯರ ಧನ್ಯತೆಯನ್ನು ಕೊಂಡಾಡುತ್ತಾನೆ;

ಅಹೋಭಾಗ್ಯಂ ಅಹೋಭಾಗ್ಯಂ
ನಂದಗೋಪ ವ್ರಜೌಕಸಾಂ |
ಯನ್ಮಿತ್ರಂ ಪರಮಾನಂದಂ
ಪೂರ್ಣಂ ಬ್ರಹ್ಮ ಸನಾತನಂ ||
(ಭಾಗವತ 10–14–32)

ಪುರುಷೋತ್ತಮನಿಗೆ ಯೌವನ ಪ್ರಾರಂಭವಾಗುವುದು. ಗೋಪಿಯರಿಗೆ ಅವನಲ್ಲಿ ಅನುರಾಗ ಹುಟ್ಟುವುದು. ಇಲ್ಲಿ ಪುರುಷೋತ್ತಮನ ಧರ್ಮವ್ಯತಿಕ್ರಮ ಆರೋಪಣೆ, ಅರ್ಥವತ್ತಾಗಿದ್ದು, ಈ ಸಂದರ್ಭದಲ್ಲಿ ಕೆಲವು ತತ್ತ್ವಗಳನ್ನು ಮನಸ್ಸಿನಲ್ಲಿಡಬೇಕು. ಭಕ್ತನು ಯಾವ ಭಾವನೆಯಿಂದ ಭಗವಂತನ ಅನುಗ್ರಹಕ್ಕಾಗಿ ಹಾತೊರೆಯುವನೋ, ಅದಕ್ಕನುಗುಣವಾಗಿ ಪರಮಾತ್ಮನು ಕೃಪೆಮಾಡುವನು. ಇದನ್ನೇ ಗೀತೆಯು ಹೀಗೆ ಹೇಳಿದೆ "ಯೇ ಯಥಾ ಮಾಂ ಪ್ರಪದ್ಯಂತೇ ತಾನ್ ತಥೈವ ಭಜಾಮ್ಯಹಂ".

ಗೋಪಿಯರು ಪುರುಷೋತ್ತಮನನ್ನು ಕೇವಲ ಮಾನವ ದೃಷ್ಟಿಯಿಂದ ನೋಡದೆ, ಅವನ ಪರತ್ವವನ್ನು ಕಂಡಿದ್ದರು. ಇದನ್ನು ಭಾಗವತವು ಹೀಗೆ ನಿರೂಪಿಸುತ್ತದೆ–

ನ ಖಲು ಗೋಪಿಕಾನಂದನೋ ಭವಾನ್
ನಿಖಿಲ ದೇಹಿನಾಂ ಅಂತರಾತ್ಮದೃಕ್ |
ವಿಖನಸಾರ್ಥಿತೋ ವಿಶ್ವಗುಪ್ತಯೇ
ಸ ಖಲುದೇಯಿವಾನ್ ಸಾತ್ವತಾಂಕುಲೇ ||
ತವಕಥಾಮೃತಂ ತಪ್ತಜೀವನಂ
ಕವಿಭಿರೀಡಿತಂ ಕಲ್ಮಷಾಪಹಂ |
ಶ್ರವಣಮಂಗಳಂ ಶ್ರೀಮದಾತತಂ
ಭುವಿಗೃಣಂತಿ ಯೇ ಭೂರಿದಾಜನಾಃ ||

ಹಾಗೆಯೇ ಉದ್ಧವನೂ ಕೂಡ ಗೋಪಿಯರ ಭಕ್ತಿಪಾರವಶ್ಯತೆಯನ್ನು ಕಂಡು ಆಶ್ಚರ್ಯಪಟ್ಟು ಗೋಪಿಯರ ಪಾದರೇಣುವಿಗೆ ನಮಸ್ಕಾರ ಮಾಡುವನು.

ಮಹಾಭಾರತದಲ್ಲಿ ನಿರೂಪಿಸಿರುವ ಪುರುಷೋತ್ತಮನ ಪಾತ್ರ 'ಧರ್ಮೋ ರಕ್ಷತಿ ರಕ್ಷಿತಃ' ಎಂಬ ಉಕ್ತಿಯನ್ನು ಸಾರ್ಥಕಪಡಿಸುತ್ತದೆ. ಕೌರವರಿಂದ ವಂಚಿತರಾದ ಪಾಂಡವರನ್ನು ರಕ್ಷಿಸಿ, ಅವರ ಹಿತವನ್ನು ಸಾಧಿಸಲು ಪುರುಷೋತ್ತಮನು ಬದ್ಧಕಂಕಣನಾಗುತ್ತಾನೆ. ತಾನು ನಿರಾಯುಧನಾಗಿ, ಪಾಂಡವರನ್ನು ನಿಮಿತ್ತವಾಗಿ ಉಪಯೋಗಿಸಿ, ವಂಚಕರಾದ ಕೌರವರನ್ನು, ವಂಚನೆ ಜೊತೆಗೆ ಸೇರಿದ ವಂಚನೆಯ ಮೂಲಕವೇ ನಾಶವಾಗುವ ಹಾಗೆ ತಂತ್ರ ನಿರ್ಮಾಣ ಮಾಡುತ್ತಾನೆ. ಜಗತ್ತಿನಲ್ಲಿ ಧರ್ಮ ಬಿಟ್ಟವರು, ಪ್ರಪಂಚವು ಧರ್ಮಮಾರ್ಗದಲ್ಲಿರಬೇಕೆಂದು ಅಪೇಕ್ಷಿಸುತ್ತಾರೆ. ಆದರೆ ತಮಗೆ ಮಾತ್ರ ಅಧರ್ಮದ ಲಾಭ ದೊರೆಯಬೇಕೆಂದು ಇಷ್ಟಪಡುತ್ತಾರೆ. ಆದರೆ ಪರಮಾತ್ಮನ ನಿಯಮವೇ ಬೇರೆ. ಧರ್ಮ ಬಿಟ್ಟವನನ್ನು ಧರ್ಮವು ರಕ್ಷಿಸುವುದಿಲ್ಲ. ಧರ್ಮಸೂತ್ರದ ವಿಧಿಯನ್ನು ನಿಂದಿಸುವುದಕ್ಕೂ ಅವರಿಗೆ ಅಧಿಕಾರವಿರುವುದಿಲ್ಲ. ಈ ತತ್ತ್ವವನ್ನು ಪುರುಷೋತ್ತಮನು, ಮಹಾಭಾರತದಲ್ಲಿ ಹೀಗೆ ತೋರಿಸಿದ್ದಾನೆ.

ಯುದ್ಧಕ್ಕೆಮುಂಚೆ ಕೌರವರು ಕೃತ್ರಿಮ ಕೌರ್ಯ, ವಂಚನೆ ಮಾಡಿದರು. ಆದರೆ ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ನಡೆದುದು ಕೌರವರ ನಾಶ. ಅದೂ ವಂಚನೆಯ ಮೂಲಕವೇ. ಈ ವಂಚನೆಗೆ ಪಾಂಡವರು ಅಬುದ್ಧಿಪೂರ್ವಕ ನಿಮಿತ್ತ. ಈ ವಂಚನೆಗೆ, ಮೊದಲು ವಂಚನೆ ಮಾಡಿದ ಕೌರವರೇ ಕರ್ತೃಗಳಾಗುತ್ತಾರೆ. ಪುರುಷೋತ್ತಮನು ಸಾಕ್ಷಾತ್ತಾಗಿ ಕರ್ತೃವಾಗದೆ, ವಂಚಕರು ವಂಚಿತರಾಗುವಂತೆ ಘಟನೆಯನ್ನು ನಿರ್ಮಿಸುವನು.

ಪುರುಷೋತ್ತಮನು ಮಹಾಭಾರತದಲ್ಲಿ ಪ್ರದರ್ಶನಮಾಡುವ ಇನ್ನೊಂದು ದೊಡ್ಡ ಗುಣ, ಜ್ಞಾನ. ಇಲ್ಲಿ ಅವನು ಜ್ಞಾನಮಯ ದೀಪವು ಪ್ರಜ್ವಲಿಸುವಂತೆ ಮಾಡುತ್ತಾನೆ. ಸೌಂದರ್ಯ, ಸೌಶೀಲ, ಸೌಲಭ್ಯಾದಿ ಗುಣ

(28 ನೇ ಪುಟ ನೋಡಿ)

# ನಾರಾಯಣವರ ಕ್ಷೇತ್ರ



ಪ್ರಶಾಂತ ಪ್ರಸನ್ನ ಪ್ರಭಾವ ಸಂಪೂರ್ಣ ಭಾರತಾಧ್ಯಾತ್ಮಿಕ ಪೀಠವಾಗಿ ಶೋಭಿಸಿ, ಭಕ್ತಜನಾಶ್ರಯವಾಗಿರುವ ಪ್ರಾಂತ್ಯ ತಿರುಪತಿ. ಹರಕೆಯ ಹಣವನ್ನು ಪಡೆಯುವಲ್ಲಿ ಪ್ರಸಿದ್ಧನಾಗಿ, ಬೇಡಿದಕೋರಿಕೆಗಳನ್ನು ಈಡೇರಿಸುವವನಾಗಿ, ಭೂಮಿಯ ಜನರೆಲ್ಲರಿಗೂ ದರ್ಶನ ಭಾಗ್ಯವನ್ನು ಪ್ರಸಾದಿಸುತ್ತ ಕಲಿಯುಗದ ಪ್ರತ್ಯಕ್ಷ ದೈವವೆಂದೆನಿಸಿದ ಶ್ರೀ ವೆಂಕಟೇಶ್ವರಸ್ವಾಮಿ. ನಿಂತ ಆ ದಿವ್ಯಕ್ಷೇತ್ರದಿಂದ ಇಪ್ಪತ್ತೈದು ಮೈಲಿ ದೂರದಲ್ಲಿ ಕಂಗೊಳಿಸುತ್ತಿರುವ ಮತ್ತೊಂದು ಪುಣ್ಯಕ್ಷೇತ್ರ ನಾರಾಯಣವರಂ.

ಶ್ರೀ ಪದ್ಮಾವತೀ ಸಮೇತನಾಗಿ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿಯು ದಕ್ಷಿಣ ಹಸ್ತದಲ್ಲಿ ಕಂಕಣ ಚಿಹ್ನೆಯುಳ್ಳವನಾಗಿ ಸಮಸ್ತ ವಸ್ತು ಸಂಪನ್ನನಾಗಿ ಸರ್ವ ಸೌಭಾಗ್ಯ ಸಮೃದ್ಧನಾಗಿ ಲೋಕವನ್ನು ಆಶೀರ್ವದಿಸುತ್ತಿರುವ ಪವಿತ್ರದೇವಾಲಯದ ಈ ನಾರಾಯಣವರಂನ ಪ್ರಭಾವ ಪ್ರಾಶಸ್ತ್ಯಗಳ ಬಗ್ಗೆ ವರಾಹಪುರಾಣದಲ್ಲಿರುವ ವೆಂಕಟಾಚಲ ಮಹಾತ್ಮೆಯಲ್ಲಿ ವಿವರಿಸಲಾಗಿದೆ.

ಚಂದ್ರವಂಶದಲ್ಲಿ ಹುಟ್ಟಿದ ಆಕಾಶರಾಜ, ದಕ್ಷಿಣಾಪಥದಲ್ಲಿರುವ ನಾರಾಯಣವರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ತುಂಡೀರಮಂಡಲವನ್ನು ಪಾಲಿಸುತ್ತಿದ್ದನು. ಅಖಿಲ ಸಂಪತ್ತಿಗೂ ತವರು ಮನೆಯಾಗಿ, ನಿಖಿಲ ಸೌಖ್ಯಗಳಿಗೂ ಆಲಯವಾಗಿರುವ ಆ ಪಟ್ಟಣದಲ್ಲಿ ಪ್ರಜೆಗಳು ಪ್ರಶಾಂತ ಜೀವನವನ್ನು ಅನುಭವಿಸುತ್ತಿದ್ದರು. ಸಮಸ್ತ ಸದ್ಗುಣ ನಿಧಿ, ಪ್ರಜಾವತ್ಸಲನೂ, ಧರ್ಮನಿರತನೂ ಆದ ಆ ಧರಣೀಶ್ವರನಿಗೆ ಸದ್ಗತಿದಾಯಕವಾದ ಸಂತಾನವು ಮಾತ್ರ ಇಲ್ಲವಾಗಿತ್ತು.

ನಂದನಮುಖಾರವಿಂದಸಂದರ್ಶನಾನಂದವನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ಪತ್ನೀಸಮೇತನಾಗಿ ಆ ಚಕ್ರವರ್ತಿಯು ಯಜ್ಞವನ್ನು ಮಾಡಲು ಸಂಕಲ್ಪಿಸಿ, ಆರಣಿ ನದೀ ತೀರದಲ್ಲಿ ಭೂಮಿಯನ್ನು ಶೋಧಿಸಿ, ಚಿನ್ನದ ನೇಗಿಲಿನಿಂದ ನೆಲವನ್ನು ಹದಮಾಡಿ ಅಂಕುರಾರ್ಪಣೆ

---

ಮೂಲ:

ಶ್ರೀ ರಾವುಲ ಸೂರ್ಯನಾರಾಯಣಮೂರ್ತಿ

---

ಗಾಗಿ ನವಧಾನ್ಯಗಳನ್ನು ಚೆಲ್ಲುತ್ತಿರುವಾಗ ಆ ಭೂಮಿಯಲ್ಲಿ ಸರ್ವಲಕ್ಷಣಗಳಿಂದ ಕೂಡಿದ ಒಂದು ಶಿಶುವು ಕಾಣಿಸಿತು. ಆನಂದ ಆಶ್ಚರ್ಯಗಳಿಂದ ಮಗ್ನ ಮಾನಸನಾದ ಆಕಾಶರಾಜ, ಪದ್ಮದಲ್ಲಿ ಉದ್ಭವಿಸಿದ ಆ ಮಗುವನ್ನು ರಾಜಧಾನಿಗೆ ತೆಗೆದುಕೊಂಡು ಹೋಗಿ ತನ್ನ ಸತೀರತ್ನವಾದ ಧರಣಿದೇವಿಗೆ ನಡೆದ ವೃತ್ತಾಂತವನ್ನು ತಿಳಿಸಿ, ಪ್ರೇಮಾನುರಾಗದಿಂದ ಬೆಳೆಸಬೇಕೆಂದು ಹೇಳಿ, ಮಗುವನ್ನು ಅವಳ ವಶಕ್ಕೆ ಕೊಟ್ಟನು. ಪದ್ಮಮುಖಿಯಾಗಿ, ಪದ್ಮಪಾಣಿಯಾಗಿ, ಪದ್ಮಚರಣಳಾಗಿ ಪದ್ಮಸಂಭವೆಯಾಗಿರುವ ಕಾರಣ ಅವಳಿಗೆ 'ಪದ್ಮಾವತಿ', ಎಂದು ನಾಮಕರಣವನ್ನು ಮಾಡಿದರು. ವಿಲಾಸ ಸೌಧಗಳಲ್ಲಿ, ವಿನೋದ ಮಂದಿರಗಳಲ್ಲಿ, ವಿಹಾರ ಮಂಟಪಗಳಲ್ಲಿ ಸಮಸ್ತ ರಾಜಭೋಗಗಳೊಂದಿಗೆ ಅವಳು ಬೆಳೆದು ಪ್ರವರ್ಧಮಾನಳಾದಳು.

ಸಕಲ ಶುಭ ಲಕ್ಷಣ ಸಮನ್ವಿತೆ, ಲಲಿತ ಲಾವಣ್ಯವತಿಯಾದ ಪದ್ಮಾವತೀದೇವಿಯು ಒಂದು ದಿನ ತನ್ನ ಸಖೀಜನರೊಡನೆ ಹೃದ್ಯವಾದ ಉದ್ಯಾನವನದಲ್ಲಿ ವಿಹರಿಸುತ್ತಿದ್ದಳು. ವನದ ಸೌಂದರ್ಯವನ್ನು, ಪ್ರಕೃತಿ ವೈಚಿತ್ರ್ಯಗಳನ್ನೂ ಅವಲೋಕಿಸುತ್ತ ಪರಮಾನಂದ ಭರಿತರಾಗಿ ಅವರು ಹೂವುಗಳನ್ನು ಕೊಯ್ಯುತ್ತಿರುವಾಗ ಮದಿಸಿದ ಆನೆಯನ್ನು ಹಿಂಬಾಲಿಸುತ್ತ, ಉತ್ತಮಾಶ್ವ ಜಾತಿಗೆ ಸೇರಿದ ಒಂದು ಕುದುರೆಯ ಮೇಲೆ ನೀಲಮೇಘಶ್ಯಾಮ ವರ್ಣದಿಂದ ಶೋಭಿಸುವ ಒಬ್ಬ ಮನ್ಮಥಾಕಾರನು ಸವಾರಿ ಮಾಡುತ್ತ ಅಲ್ಲಿಗೆ ಬಂದು, ಭಯಭೀತರಾದ ಆ ವನಿತೆಯರನ್ನು ಸಮೀಪಿಸಿ 'ಗಜೇಂದ್ರ ಹೋದ ದಾರಿಯನ್ನು ನೋಡಿದಿರಾ' ಎಂದು ಪ್ರಶ್ನಿಸಿದನು. ಅದಕ್ಕೆ ಅವರು ಅತ್ಯಂತ ರಮಣೀಯವಾದ ಆ ನಂದೋದ್ಯಾನ ಪ್ರದೇಶಕ್ಕೆ ಧನುರ್ಬಾಣ ಧರಿಸಿದ ಅವನು ಬಂದಿರುವುದು ಉಚಿತವಲ್ಲವೆಂದು, ಬೇಟೆಗಾರರಿಗೆ ಅಲ್ಲಿ ಪ್ರವೇಶವಿಲ್ಲವೆಂದು ವಿವರಿಸಿ ಅವನ ಕುಲಗೋತ್ರವನ್ನು ಕುರಿತು ಒಂದಾದ ಮೇಲೊಂದರಂತೆ ಪ್ರಶ್ನಿಸಿದರು.

ಆಗ್ರಹಾವೇಶ ಪೂರಿತರಾದ ಅವರ ವಾಗ್ಧೋರಣೆಗೆ - ಆ ಅಶ್ವಾರೋಹಿಯು ಕುದುರೆಯಿಂದ ಇಳಿದು 'ಓ ಕನ್ಯೆಯರೇ! ನೀವು ಯಾರು ? ಕನಕಾಂಬುಜ ಸಮಾನ ದೇಹ, ಚಾರುಸರ್ವಾಂಗಿಯೂ ಆದ ಆ ಸೌಭಾಗ್ಯವತಿ ಯಾರು ?' ಎಂದು ಎದುರು ಪ್ರಶ್ನೆ ಹಾಕಿದನು. ಅದಕ್ಕೆ ಪ್ರತ್ಯುತ್ತರವಾಗಿ ಅವರು ಪದ್ಮಾವತೀದೇವಿಯ ಮಧುರ ಮಂಜುಲ ವೃತ್ತಾಂತವನ್ನು ವಿವರಿಸಿದರು, ಕರ್ಣಮನೋಹರವಾದ ಅದನ್ನು ಕೇಳಿದ ಸುಕುಮಾರನು ತನ್ನದು ದಿನಕರ ಕುಲವೆಂದು ಹಿರಿಯರು ಹೇಳುವರೆಂದೂ, ಅಖಿಲ ವಿಶ್ವದಲ್ಲಿ ಅಣುಅಣುವಾಗಿ ವ್ಯಾಪಿಸಿ ಬೆಳಗುತ್ತಿರುವ ನಿರ್ವ್ಯಾಜ ತೇಜಸ್ಸನ್ನು ಹೊಂದಿದ ಹೆಸರುಗಳು ಅನಂತವಾದರೂ, ದೇಹವರ್ಣದಿಂದ ಕೃಷ್ಣನೆಂದು ಕರೆಯುವರೆಂದೂ, ವೇಂಕಟಾದ್ರಿಯು ತನ್ನ ನಿವಾಸವೆಂದೂ ತಿಳಿಸಿದನು. ರಮಣೀಯ ರೂಪರೇಖಾ ವಿಲಾಸವತಿಯಾದ ಪದ್ಮಾವತೀದೇವಿಯೊಂದಿಗೆ ಕಲ್ಯಾಣವನ್ನು ನಿರೀಕ್ಷಿಸುವೆನೆಂದು ಅದಕ್ಕಾಗಿ ಸಮುಚಿತವಾದ ಸಹಾಯವನ್ನು ಮಾಡಬೇಕೆಂದು ಆ ಸಖಿಯರನ್ನು ಪ್ರಾರ್ಥಿಸಿದನು.

ಆ ಸಮಯದಲ್ಲಿ ಅವರಿಬ್ಬರೂ ಅವಲೋಕನದಲ್ಲಿ ಪರಸ್ಪರ ಪ್ರೇಮಾನುರಾಗಿಗಳಾದರು. ಶ್ರೀನಿವಾಸನ ಮಾತುಗಳನ್ನು ಅಪ್ರಸ್ತುತ ಪ್ರಸಂಗವೆಂದು ಭಾವಿಸಿ ಪದ್ಮಾವತಿ ಮತ್ತು ಅವಳ ಸಖೀಜನರು ರೋಷಾವೇಷ ಹೊಂದಿ ಕಲ್ಲುಗಳನ್ನು ಬೀರಿದರು. ಶಿಲಾಘಾತ ಶರೀರದವನಾದ ಶ್ರೀನಿವಾಸನು ಅವಮಾನದಿಂದ ತನ್ನ ಆವಾಸ ಸ್ಥಾನವಾದ ಶ್ರೀ ವೇಂಕಟಾದ್ರಿಯನ್ನು ಸೇರಿಕೊಂಡನು.

ಆ ದಿವ್ಯಾಲಯದಲ್ಲಿ ಶ್ರೀನಿವಾಸನು ನವರತ್ನ ಖಚಿತವಾದ-ಪರ್ಯಂಕದ ಮೇಲೆ ಕರ್ಣಾಂತಾಯತಲೋಚನಳಾದ ಕನ್ಯಾರತ್ನವನ್ನು ಪುನಃ ಪುನಃ ಸ್ಮರಿಸುತ್ತ ಪರವಶನಾಗಿರುವನು. ಆಹಾರ ವಿಹಾರಗಳನ್ನು ನೀಗಿ ಚಿಂತಾಮನಸ್ಕನಾಗಿ ಮಲಗಿದ ಆ ಮಹಾಮಹಿಮ ಸಂಪನ್ನನಿಗೆ ಮಧ್ಯಾಹ್ನ ಸಮಯದಲ್ಲಿ ಮಾಮೂಲಿನಂತೆ ವಕುಳಮಾಲಿಕೆಯು ಪಂಚಭಕ್ಷ್ಯ ಪರಮಾನ್ನಗಳನ್ನು ನೀಡುವ ಕಾರಣದಿಂದ ಅಲ್ಲಿಗೆ ಬಂದಳು. ಆದರೆ ಕಾಮಪೀಡಿತನಾದ ಅವನ ಪರಧ್ಯಾನವನ್ನು ಕಂಡು 'ಯಾವ ಸುಂದರಾಂಗಿ

(25 ನೇ ಪುಟ ನೋಡಿ)

# ವೇದಾಂತ ದೇಶಿಕರ ಕಾವ್ಯ ಗ್ರಂಥಗಳು

ಶ್ರೀ ವೇಂಕಟನಾಥರು ಉಚ್ಚಮಟ್ಟದ ಕವಿಗಳು. ಬಹುಮೇಧಾವಿಗಳು. ಉನ್ನತಮಟ್ಟದ ಪ್ರತಿಭಾವಂತರು. ಮಹಾಕವಿಗಳಾದ ವಾಲ್ಮೀಕಿ, ಕಾಳಿದಾಸ ಭಾರವಿ ಮೊದಲಾದವರನ್ನು ಪೂರ್ಣವಾಗಿ ಅಭ್ಯಾಸಮಾಡಿ ಅವರಿಂದ ಪ್ರಭಾವಿತರಾಗಿ ತಾವು ಗ್ರಂಥ ರಚನೆಮಾಡಲು ಹೊರಟು ಆ ಶಾಖೆಯಲ್ಲಿ ಏಳು ಕಾವ್ಯ ನಾಟಕಗಳನ್ನು ರಚಿಸಿದ್ದಾರೆ.

ವೇದಾಂತದೇಶಿಕರವರ ಕಾವ್ಯ ಕೃತಿಗಳಲ್ಲಿ 'ಯಾದವಾಭ್ಯುದಯ'ವು ಪ್ರಧಾನವಾದದ್ದು. ಇದೊಂದುಮಹಾಕಾವ್ಯ. ಇದರ ೨೪ ಸರ್ಗಗಳಲ್ಲಿ ಆಚಾರ್ಯರು ಶ್ರೀ ಕೃಷ್ಣಾವತಾರದಿಂದ ಹಿಡಿದು ಭಾರತಯುದ್ಧ ಸಮಾಪ್ತಿವರೆಗಿನ ಕಥೆಯನ್ನು ವರ್ಣಿಸಿದ್ದಾರೆ. ಇದು ಕಾಳಿದಾಸನ ರಘುವಂಶದ ಮಾದರಿಯದು. ಆದರಿಂದ ವಿಶೇಷಪ್ರಭಾವಿತವಾಗಿದೆ. ಇದಕ್ಕೆ 'ಯದುವಂಶ' 'ಕೃಷ್ಣಾಭ್ಯುದಯ ಎಂಬ ಇತರ ಹೆಸರುಗಳೂ ಉಂಟು. ವಿಜಯನಗರದ ಆಸ್ಥಾನಕವಿಗಳಾದ ಡಿಂಡಿಮರಲ್ಲಿ ಆದ್ಯನಾದ ಡಿಂಡಿಮನೆಂಬುವನು ತನ್ನ 'ರಾಮಾಭ್ಯುದಯ' ನೆಂಬ ಕಾವ್ಯವನ್ನು ತೋರಿ ದೇಶಿಕರನ್ನು ಸ್ಪರ್ಧೆಗೆ ಕರೆದನೆಂದೂ ಅದಕ್ಕೆ ಪ್ರತಿಯಾಗಿ ದೇಶಿಕರು ಒಂದೇ ರಾತ್ರಿಯಲ್ಲಿ ತಮ್ಮ, ಯಾದವಾಭ್ಯುದಯವನ್ನೂ ರಚಿಸಿ ತೋರಿಸಲು ಪ್ರತಿಸ್ಪರ್ಧಿಯು ಪರಾಜಿತನಾಗಿ,

ದ್ವಿಚತುಷ್ಪದ ಪರಿವರ್ತನಗರ್ವಿತ
ಕವಿಶರಭ ಗಂಡಭೇರುಂಡ :
ಖಂಡನ ಖಂಡನ ಕವಿರಹ
ಡಿಂಡಿಮಕವಿ ಗಂಡಡಿಂಡಿಮೋ ಜಯತು ॥

ಎಂಬ ಶ್ಲೋಕದಿಂದ ತನ್ನ ಸೋಲನ್ನೂ ಒಪ್ಪಿಕೊಂಡನೆಂಬ ಒಂದು ದಂತಕಥೆಯಿದೆ, ಇದು ಒಂದು ದಿನದ ಕವಿತೆಯಿರಲಾರದು. ದೀರ್ಘಕಾಲದ ವ್ಯವಸಾಯದಿಂದ ನಿದಾನವಾಗಿ ರಚಿಸಿದ ಗ್ರಂಥವಿರಬೇಕು. ವಿವಿಧವೃತ್ತಗಳಲ್ಲಿ ರಚಿತವಾದ ಈ ಕಾವ್ಯವು ವರ್ಣನಾರಮಣೀಯತೆಯಿಂದಲೂ ಸರಳಪದವಿನ್ಯಾಸ ಸೌಕುಮಾರ್ಯಗಳಿಂದಲೂಕಾಳಿದಾಸನ ರಘುವಂಶಕ್ಕೆ ಸಮಾನವಾಗಿರುವುದಲ್ಲದೆ ಕೆಲವೆಡೆಗಳಲ್ಲಿ ಅದನ್ನೂ ಮೀರಿಸಿದೆ. ಇದರಲ್ಲಿ ಯದುವಂಶವರ್ಣನೆ, ಶ್ರೀ ಕೃಷ್ಣಾವತಾರ, ಬಾಲಲೀಲೆ ಗೋವರ್ಧನೋದ್ಧರಣ, ಋತುವರ್ಣನೆ, ಇಂದ್ರ ವಿಜಯ, ರಾಸಲೀಲೆ ಕಾಳಿಮರ್ದನ ಗೋಪಿಕಾವಿರಹವರ್ಣನೆ, ಕಂಸವಧೆ, ಕೃಷ್ಣನ ದ್ವಾರಕಾಭಿಗಮನ, ದ್ವಾರಕಾಪುರವರ್ಣನೆ, ರುಕ್ಮಿಣೀಸ್ವಯಂವರ ಸ್ಯಮಂತಕೋಪಾಖ್ಯಾನ ಮತ್ತು ಸತ್ಯಭಾಮಾಪರಿಣಯ, ಶಿಶುಪಾಲವಧೆ, ನರಕಾಸುರಸಂಹಾರ ಮತ್ತು ಷೋಡಶಸಹಸ್ರ ಗೋಪೀಸ್ವೀಕರಣ. ನಂದನವನವರ್ಣನೆ, ದ್ವಾರಕಾಭಿಗಮನ, ಕೃಷ್ಣನನ್ನು ಕುರಿತ ವಂದಿಮಾಗಧರ ಸ್ತುತಿ, ಸುಪ್ರಭಾತ, ಉಷಾನಿರುದ್ಧ ವಿವಾಹ, ಶೋಣಿತ ಪುರವಿಜಯ, ಪೌಂಡರೀಕಾದಿ ರಾಕ್ಷಸ ಸಂಹಾರ, ಕೃಷ್ಣನ ಪ್ರಪಂಚವಿಜಯ, ಗೀತೋಪದೇಶ, ಮತ್ತು ಅಂತಃಪುರವರ್ಣನೆ ಮೊದಲಾದವು ಕ್ರಮವಾಗಿ ವರ್ಣಿತವಾಗಿವೆ. ಇದಕ್ಕೆ ಸುಪ್ರಸಿದ್ಧ ಅದ್ವೈತಪಂಡಿತರಾದ ಅಪ್ಪಯ್ಯದೀಕ್ಷಿತರು ವ್ಯಾಖ್ಯಾನವನ್ನು ರಚಿಸಿದ್ದಾರೆ. ಇದರ ಉಪೋದ್ಘಾತದಲ್ಲಿ ಈ ಕಾವ್ಯದ ಪ್ರೌಢಿಮೆಯಿಂದ ಆಕರ್ಷಿತರಾದ ವಿಜಯನಗರದರಸರು ಇದಕ್ಕೆ 'ಮಹಾಕಾವ್ಯ' ವೆಂಬ ಪ್ರಶಸ್ತಿಯನ್ನಿತ್ತರೆಂದು ಹೇಳಿರುವುದಲ್ಲದೆ ಮೊದಲನೆಯ ಸರ್ಗದ ಒಂಬತ್ತನೆಯ ಶ್ಲೋಕಕ್ಕೆ ವ್ಯಾಖ್ಯಾನವನ್ನು ಬರೆಯುತ್ತ,

ಇತ್ಥಂ ವಿಚಿಂತ್ಯಾಸ್ಸರ್ವತ್ರ ಭಾವಾಸ್ಸಂತಿ
ಪದೇ ಪದೇ
ಕವಿತಾರ್ಕಿಕಸಿಂಹಸ್ಯ ಕಾವ್ಯೇಷು ಲಲಿತೇಷ್ವಪಿ॥

ಎಂದು ಇದರ ಭಾವಪುಷ್ಟಿಯನ್ನು ಲಾಲಿತ್ಯವನ್ನೂ ಕೊಂಡಾಡಿದ್ದಾರೆ. ಇದರ ವಸ್ತುರಚನೆಯನ್ನು ನೋಡಿದರೆ ಇದಕ್ಕೆ ಶ್ರೀಮದ್ಭಾಗವತವೇ ಮೂಲವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಕಾಲದ ಭಿರುಚಿಗನುಗುಣವಾಗಿ ಅನೇಕ ಚಿತ್ರಕವಿತೆಗಳೂ ಬಂಧಗಳೂ ಇವೆ. ಯಥಾವತ್ತಾಗಿ ಸರಳವಾಗಿ ಬರೆಯಬೇಕೆಂದು ಹೊರಟಾಗ ಸಂದರ್ಭಕ್ಕೆ ತಕ್ಕಂತೆ ಪದಪ್ರಯೋಗವೂ ಛಂದಸ್ಸಿನ ಯೋಜನೆಯೂ ಬಹು ಮನೋಹರವಾಗುತ್ತದೆ. ನೃಸಿಂಹಾವತಾರವನ್ನು ವರ್ಣಿಸುವಾಗ 'ಸಟಾಪಟಲ ಭೀಷಣೇ ಸರಭಸಾಟ್ಟಹಾಸೋದ್ಭಟೇ' ಎಂಬ ಶ್ಲೋಕದಲ್ಲಿರುವ ರೌದ್ರರಸದ್ಯೋತಕವಾದ ಪದಬಂಧವೂ ಕೃಷ್ಣನು ಕಾಳಿಂಗಸರ್ಪನ ಹೆಡೆಯಮೇಲೆ ನಾಟ್ಯವಾಡುವುದನ್ನು ವರ್ಣಿಸುವ,

ಲೋಲಾವತಚ್ಚರಣ ಲೀಲಾಹತಕ್ಷರಿತ
ಹಾಲಾಹಲೇ ನಿಜಫಣೇ
ನೃತ್ಯಂತಮಪ್ರತಿಘ ಪುಷ್ಯಂತಮಪ್ರತಿಮಮ
ತ್ಯಂತ ಚಾರುವಪುಷಮ್ ॥



ಎಂಬ ಶ್ಲೋಕದ ನಾಟ್ಯಶೈಲಿಯೂ ಚಿತ್ತಾಕರ್ಷವಾಗಿವೆ. ದೇಶಿಕರ ವರ್ಣನಾಶಕ್ತಿಯು ಅದ್ಭುತವಾದದು. ಯಾದವಾಭ್ಯುದಯದಲ್ಲಿ ಸೂರ್ಯಚಂದ್ರರ ಉದಯಾಸ್ತಗಳ ಉಲ್ಲೇಖಗಳು ಬಹು ಸ್ವಾರಸ್ಯವಾಗಿವೆ.

ದೃಷ್ಟ್ವಾನಿಮೀಲಿತಪತೀಂ ನಿಯತಿ ಪ್ರಭಾವಾತ್
ಆತ್ಮಪ್ರಿಯಾಂ ಕುಮುದಿನೀಯವಧೂತ
ಧಾಮಾ
ಜ್ಯೋತತ್ತುಷಾರನಯನೋದಕಬಿಂದುರಿಂದುಃ
ಪ್ರಸ್ಥಾನಮಿಚ್ಛತಿ ಮಹತ್ಪ್ರತಿಪನ್ನ ದೈನ್ಯಃ ॥
ಆಮೃಶ್ಯರಾತ್ರಿಮರುಣೋದಯ ಜಾತ
ಪುಷ್ಪಾಂ
ಪ್ರಾಪ್ತಾನುತಾಪ ಇವ ಸತ್ಪಥ ಲಂಘನೇನ।
ಜ್ಯೋತ್ಸ್ನಾಂಶುಕಂ ದ್ವಿಜಪತಿಃ ಪರಿಧಾಯ
ನೂನಂ
ಪ್ರೀಡಾನತೋ ವಿಶತಿ ವಾರಿನಿಧಿಂ ವಿವರ್ಣಃ॥
ಪರ್ಯಾಪ್ತರಶ್ಮಿನಿಕರೇಣ ಸುವೃತ್ತಭೂಮ್ನಾ
ಸೂರ್ಯೇಂದು ಬಿಂಬಯುಗಳೇನ ಸಮುಸ್ಥಿತೇನ
ಆಭಾತಿ ಕಾಲವಣಿಜಾ ಪರಿಕಲ್ಪ್ಯಮಾನಾ
ನಕ್ತಂದಿಪಕ್ಷಣತುಲೇವ ನಭಸ್ಥಲಶ್ರೀ : ॥

---

ಡಾ॥ ಎಸ್. ಅನಂತರಂಗಾಚಾರ್.

---

ಮೇಲಿನ ಮೊದಲೆರಡು ಶ್ಲೋಕಗಳಲ್ಲಿ ಚಂದ್ರಾಸ್ತಮಯವೂ ಮೂರನೆಯದರಲ್ಲಿ ಸಂಧ್ಯಾಸಮಯವೂ ಬಹುಚಮತ್ಕಾರವಾಗಿ ವರ್ಣಿತವಾಗಿವೆ. 'ಯಾದವಾಭ್ಯುದಯ'ಕ್ಕೆ ಏ.ವಿ. ಗೋಪಾಲಾಚಾರ್ಯರ ದ್ರಾವಿಡಪರಿವರ್ತನವಿದೆ. 'ಯಾದವಾಭ್ಯುದಯ'ದ ಮೊದಲ ಹನ್ನೆರಡು ಸರ್ಗಗಳು ಶ್ರೀರಂಗವಾಣೀವಿಲಾಸ ಮುದ್ರಾಕ್ಷರ ಶಾಲೆಯಿಂದಲೂ, ಮುಂದಿನವು ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದಿಂದಲೂ ಪ್ರಕಟವಾಗಿವೆ.

## ಹಂಸ ಸಂದೇಶ :

ಇದು ಆಚಾರ್ಯರಿಂದ ರಚಿತವಾದ ಒಂದು ಸಂದೇಶಕಾವ್ಯ. ಮಹಾಕವಿ ಕಾಳಿದಾಸನ 'ಮೇಘಸಂದೇಶ'ದ ಮಾದರಿಯದು. ಆಂಜನೇಯನಿಂದ ಲಂಕೆಯ ಅಶೋಕವನದಲ್ಲಿ ಸೀತೆಯಿರುವುದನ್ನು ತಿಳಿದು ಆಕೆಯ ಸಮೀಪಕ್ಕೆ ಶ್ರೀರಾಮನು ಹಂಸವೊಂದರ ಮೂಲಕ ಸಂದೇಶವನ್ನು ಕಳುಹಿಸುವುದು ಇಲ್ಲಿಯ ವರ್ಣನೀಯಾಂಶ. ಇದರ ಸಾಮಾನ್ಯಸ್ವರೂಪ, ಮೂಲರೇಖೆ ಛಂದಸ್ಸಿನ ಯೋಜನೆ, ಇವೆಲ್ಲ ಕಾಳಿದಾಸನವೇ. ಇದರಲ್ಲಿಯೂ 'ಮೇಘಸಂದೇಶ' ದಂತೆಯೇ ವಿರಹವ್ಯಾಕುಲನಾದ ನಾಯಕನು ದೂತನನ್ನು ಆಕಸ್ಮಿಕವಾಗಿ ನೋಡುವುದು, ಬಹಳಕಾಲದಿಂದ ಅಗಲಿ ದೂರದೇಶದಲ್ಲಿರುವ ನಾಯಕಿಗಾಗಿ ನಾಯಕನು ದುಃಖಿಸುವುದು, ತಾನು ಬಂದು ಬಿಡಿಸಿಕೊಂಡು ಬರುವವರೆಗೆ ಜೀವವನ್ನು ಉಳಿಸಿಕೊಂಡಿರುವಂತೆ ನಾಯಕನು ನಾಯಕಿಗೆ ಸುದ್ದಿಕಳುಹಿಸುವುದು, ದೂತನಲ್ಲಿ ನಾಯಕನಿಗಿರುವ ಅವ್ಯಾಜವಾದ ವಾತ್ಸಲ್ಯ, ಅವನ ಔದಾರ್ಯದಲ್ಲಿಯೂ ಕಾರ್ಯದಕ್ಷತೆಯಲ್ಲಿಯೂ ನಾಯಕನಿಗಿರುವ ನಂಬಿಕೆ, ಶುಭಶಕುನಗಳು, ಮಾರ್ಗವಿವರಣ, ಮಾರ್ಗದಲ್ಲಿ ದೂತನಿಗೆ ಆಹ್ಲಾದವನ್ನುಂಟುಮಾಡುವ ಸನ್ನಿವೇಶಗಳು, ಅಲ್ಲಿಸಿಕ್ಕತಕ್ಕ ಪವಿತ್ರಸ್ಥಳಗಳ ಉಲ್ಲೇಖಗಳು, ಧ್ಯೇಯಸ್ಥಳದ ವರ್ಣನೆ, ಅಲ್ಲಿ ನಾಯಕಿಯ ಸ್ಥಿತಿ, ಮನೋಹರವಾದ ದೂದು, ದೂತನ ದಕ್ಷತೆ ಮತ್ತು ಪ್ರಾಮಾಣಿಕತೆಯ ನಿದರ್ಶನ, ದೂತನಿಗೆ ನಾಯಕನು ಮಾಡುವ ಆಶೀರ್ವಾದ, ಮೊದಲಾದುವು ಉಕ್ತವಾಗಿದೆ ಎರಡು ಆಶ್ವಾಸಗಳಿಂದ ಕೂಡಿದೆ. ಪ್ರಥಮ ಭಾಗದಲ್ಲಿ ೬೦ ಶ್ಲೋಕಗಳೂ ದ್ವಿತೀಯ ಭಾಗದಲ್ಲಿ ೪೦ ಶ್ಲೋಕಗಳೂ ಇವೆ ಆದರೆ ಎರಡರ ದೃಷ್ಟಿಯಲ್ಲಿಯೂ ವಿಶೇಷ ವ್ಯತ್ಯಾಸವಿದೆ. 'ಮೇಘಸಂದೇಶ' ದಲ್ಲಿ ಪ್ರಾಕೃತ ಭೋಗಪ್ರವಣನಾದ ಯಕ್ಷನು ತನ್ನ ಯಜಮಾನನ ಕೋಪದ ಫಲವಾಗಿ ಕಾಂತಿಯಿಂದ ಬಿಡಲ್ಪಟ್ಟವನಾಗಿ ದಕ್ಷಿಣದಿಂದ ಉತ್ತರದಿಕ್ಕಿಗೆ ಕಾಮರಸಾವಲಂಬನಭೂತಳಾದ ಕಾಂತಿಯನ್ನು ಕುರಿತು ಕಾಮರಸೋದ್ದೀಪನವೂ ತಾಮಸವೂ ಕೃಷ್ಣವರ್ಣವೂ ಆದ ಮೇಘವನ್ನು ಕಳುಹಿಸಿರುವುದು ಪ್ರಸಿದ್ಧವಾಗಿಯೇ ಇದೆ. ಹಂಸಸಂದೇಶವಾದರೋ ಅಪವರ್ಗಶ್ರಿಯಃ ಪ್ರದನಾದ ಶ್ರೀ ರಾಮನು ಕರುಣಾಮಯವಾದ ಸ್ವಸಂಕಲ್ಪದಿಂದಲೇ, ವಿರಹವನ್ನನುಭವಿಸುತ್ತಿರುವ ತನ್ನ ಸಹಧರ್ಮಚಾರಿಣಿಯೂ ಜಗನ್ಮಾತೆಯೂ ಆದ ಮೈಥಿಲಿಯನ್ನು ಕುರಿತು ಉತ್ತರದಿಕ್ಕಿನಿಂದ ದಕ್ಷಿಣದಿಕ್ಕಿಗೆ ಸಾತ್ವಿಕವೂ ಶುಭ್ರವರ್ಣವೂ ಆದ ರಾಜ ಹಂಸವನ್ನು ದೂತನನ್ನಾಗಿ ಕಳುಹಿಸಿದನೆಂಬ ಮಹದ್ವಿಷಯ ವೈಲಕ್ಷಣ್ಯದಿಂದ ಕೂಡಿದೆ. ಇಲ್ಲಿಯೂ ಕೂಡ ಅಸ್ಯಾಪದೇಶದಿಂದ ಒಂದು ಔಪನಿಷದರ್ಥವಿಶೇಷವು ಪರಿಸ್ಫುರಣವಾಗುವುದು. ಅದೆಂದರೆ ಅನಾದಿಕರ್ಮವಾಸನೆಯಿಂದ ಭಗವಂತನ ವಿಶ್ಲೇಷಣವನ್ನು ಹೊಂದಿದ ಜೀವನು ಸಂಸಾರದುಃಖದಿಂದ ಪರಿವೇಷ್ಟಿತನಾಗಿ ಯಾವುದೋ ದುಃಖವನ್ನನುಭವಿಸುತ್ತಿರುತ್ತಾನೆ. ಹೀಗಿರುವಲ್ಲಿ ಜೀವನ ಪ್ರಾರಬ್ಧ ಸುಕೃತ ವಿಶೇಷದಿಂದ ಮೋಕ್ಷವುಂಟಾಗುವ ಕಾಲದಲ್ಲಿ ಅಪವರ್ಗಪ್ರದನಾದ ಭಗವಂತನು ತಾನೇ ಮೋಕ್ಷವ್ಯಾಜದಿಂದ ಅವನ ಬೋಧನೆಗಾಗಿ ಒಬ್ಬ ಸ್ವಾತಿಕನಾದ ಆಚಾರ್ಯನನ್ನು ಪರಮಹಂಸರೂಪದಿಂದ ಕಳುಹಿಸುತ್ತಾನೆ. ಆ ಆಚಾರ್ಯದ್ವಾರಾ ಜೀವನು ಮಂತ್ರರಹಸ್ಯಾದ್ಯುಪದೇಶಗಳಿಂದ ಅಧಿಗತಜ್ಞಾನನಾಗಿ ಸಂಸಾರದಿಂದ ಬಿಡುಗಡೆಯನ್ನು ಪಡೆಯುತ್ತಾನೆ— ಎಂಬ ವೇದಾಂತಾರ್ಥರಹಸ್ಯವನ್ನು ಆಚಾರ್ಯರು ಇಲ್ಲಿ ಹಿತೋಪದೇಶಾರ್ಥವೆಂದು ಪ್ರಕಟಿಸಿದ್ದಾರೆ. ಅದಕ್ಕನುಗುಣವಾಗಿಯೇ ಆಚಾರ್ಯರು ಇಲ್ಲಿ ರಾಜಹಂಸನ ದಾರಿಯಲ್ಲಿ ಸಿಕ್ಕುವ ದಿವ್ಯಕ್ಷೇತ್ರಗಳ ವರ್ಣನೆಯನ್ನು ಮಾಡಿದ್ದಾರೆ. ಹಾಗೆಯೇ ಎರಡನೆಯ ಭಾಗದಲ್ಲಿ ಸೀತೆಯ ವಿಷಯಕವಾದ ಶ್ರೀರಾಮನ ದಿವ್ಯಪ್ರೇಮವನ್ನು ವಿವರಿಸಿದ್ದಾರೆ. ಅಲ್ಲದೆ ಆಳ್ವಾರ್ರವರ ಭಗವಂತನನ್ನು ಕುರಿತ ಸಂಶ್ಲೇಷಕಾತರತೆಯನ್ನು ಗರ್ಭೀಕರಿಸಿದ್ದಾರೆ. ಸಂದೇಶಕಾವ್ಯಗಳಲ್ಲಿ 'ಮೇಘಸಂದೇಶ' ವನ್ನು ಬಿಟ್ಟರೆ ಇದೇ ಅತ್ಯುತ್ತಮವೆಂದು ಹೇಳಬಹುದು. ಇಲ್ಲಿಯ ವರ್ಣನಾವೈಭವವೂ, ಪಾತ್ರಚಿತ್ರಣವೂ ಪರಮಮೋಹಕವಾಗಿವೆ. ಹಂಸದ ದಾರಿಯಲ್ಲಿ ಸಿಕ್ಕುವ ಕಾಂಚೀಪುರದ ವರದರಾಜಸ್ವಾಮಿಯ ವರ್ಣನೆಯನ್ನು ಮುಂದಿನ ಶ್ಲೋಕಗಳಲ್ಲಿ ಕಾಣಬಹುದು.

ನಾನಾರತ್ನೈರುಪಚಿತಗುಣಾಂ ನಿತ್ಯಸಂಗೀತನಾದಾಂ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | | | |
|---|---|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಯಿಂದ | 5–30 | ವರೆಗೆ |
| ಸಹಸ್ರನಾಮಾರ್ಚನೆ | ,, | 5–30 ಗಂಟೆಯಿಂದ | 6–00 | ವರೆಗೆ |
| ಮೊದಲನೆಯ ಗಂಟೆ | ,, | 6–00 ಗಂಟೆಯಿಂದ | 6–30 | ವರೆಗೆ |
| ಸರ್ವದರ್ಶನ | ,, | 6–30 ಗಂಟೆಯಿಂದ ಮಧ್ಯಾಹ್ನ | 1–00 | ವರೆಗೆ |
| ಎರಡನೇ ಗಂಟೆ | ಮಧ್ಯಾಹ್ನ | 1–00 ಗಂಟೆಯಿಂದ | 1–30 | ವರೆಗೆ |
| ಸರ್ವದರ್ಶನ | ,, | 1–30 ರಿಂದ ರಾತ್ರಿ | 7–30 | ವರೆಗೆ |
| ರಾತ್ರಿ ಗಂಟೆ | ರಾತ್ರಿ | 7–00 ರಿಂದ ರಾತ್ರಿ | 8–45 | ವರೆಗೆ |
| ಏಕಾಂತಸೇವೆ, ತೀರ್ಮಾನ | ರಾತ್ರಿ | 8–45 ರಿಂದ ರಾತ್ರಿ | 9–00 | ವರೆಗೆ |

ಗಮನಿಕೆ :– ಶುಕ್ರವಾರಗಳಲ್ಲಿ ಮೇಲಿನ ಕಾರ್ಯಕ್ರಮಗಳಲ್ಲಿ ಬದಲಾವಣೆ ಉಂಟು. ಸಹಸ್ರನಾಮಾರ್ಚನೆಯ ಟಿಕೆಟ್ ಬೆಲೆ 6–50 ರೂ. ಒಂದು ಟಿಕೆಟ್ಟಿಗೆ ನಾಲ್ವರು ಅನುಮತಿಸಲ್ಪಡುತ್ತಾರೆ.

ಸರ್ವದರ್ಶನದ ಸಮಯದಲ್ಲಿ 1–50 ರೂ. ಟಿಕೆಟ್ಟಿನಿಂದ ಭಕ್ತರು ಅಷ್ಟೋತ್ತರ ಅರ್ಚನೆ ನಡೆಸಿಕೊಳ್ಳಬಹುದು.

**ಪೇಷ್ಕಾರ್.**

ಭೂಮೇರ್ದುರ್ಲಕ್ಷ್ಯಸ್ಯುಚಿತವಿಭವಂ ಭೂಷಣಂ
ತತ್ರ ಕಾಂಚೀಮ್
ಯಸ್ಯಾಂ ನಿತ್ಯಂ ನಿಹಿತನಯನೋ
ಹಸ್ತಿಶೈಲಾಧಿವಾಸೀ
ದ್ವಂದ್ವಾತೀತಃ ನ ಖಲು ಪುರುಷೋ ದೃಶ್ಯತೇ
ಸತ್ಯಕಾಮಃ
ಸಂಚಿನ್ವಾನಾ ತರುಣತುಲಸೀದಾಮಭಿ
ಸ್ಸ್ವಮಭಿಖ್ಯಾಂ
ತಸ್ಯಾಂ ವೇದ್ಯಾಮನುಪಿದಧತೀ ಶ್ಯಾಮಲಂ
ಹವ್ಯವಾಹಮ್
ಭೋಗೈಶ್ವರ್ಯಪ್ರಿಯಸಹಚರೈಃ ಕಾಪಿ
ಲಕ್ಷ್ಮೀ ಕಟಾಕ್ಷೈಃ
ಭೂಯಶ್ಶ್ಯಾಮಾ ಭುವನಜನನೀ ದೇವತಾ
ಸನ್ನಿಧತ್ತೇ ॥

ಸೀತೆಯು ಲಂಕೆಯಲ್ಲಿ ಅಶೋಕವನದಲ್ಲಿ ಶಿಂಶುಪಾವೃಕ್ಷದಡಿಯಲ್ಲಿ ಇದ್ದಿರಬಹುದಾದ ಸ್ಥಿತಿಯನ್ನು ವರ್ಣಿಸುವ ಮುಂದಿನ ಶ್ಲೋಕಗಳು ಕವಿಗೆ ವ್ಯಕ್ತಿಚಿತ್ರದಲ್ಲಿರುವ ನೈಪುಣ್ಯವನ್ನು ತೋರಿಸುವ ಉತ್ತಮ ನಿದರ್ಶನಗಳು.

ಶುದ್ಧಾ ಮಿಂದೋಶ್ಶ್ವಪಚಭವನೇ
ಕೌಮುದೀಂ ವಿಸ್ಫುರಂತೀಂ
ಆಸೀತಾಂ ವಾ ವಿಷುತರುವನೇ ಪಾರಿಜಾತಸ್ಯ
ಶಾಖಾಂ ।
ಸೂಕ್ತಿಂ ರಮ್ಯಾಂ ಖಲಪರಿಸರೇ ಸತ್ಕೃತೀ :
ಕೀರ್ತ್ಯಮಾನಾಂ
ಮನ್ಯೇ ದೀನಾಂ ನಿಶಿಚರಗೃಹೇ
ಮೈಥಿಲಸ್ಯಾತ್ಮಜಾತಾಂ ॥
ಅಂಗೈರ್ಮ್ಲಾಯತ್ ಕಿಸಲಯಸಮೈರ್ಜ್ಝಿ
ಯಿತಾ ಕಲ್ಪಪುಷ್ಪೈಃ
ಗಾಢಾಶ್ಲಿಷ್ಟಾಂ ವಪುಷಿ ವಿಮಲೇ
ಬಿಂಬಿತಾಭಿರ್ಲತಾಭಿಃ ।
ಸಂತಾಪೋಷ್ಣಶ್ವಸನಪರುಷಚ್ಛಾಯಯಾ
ಕಿಂಚಿದೂನಾಂ
ಬಂದೀಭೂತಾಂ ನಿಶಿಚರಗೃಹೇ ನಂದನಸ್ಯೇವ
ಲಕ್ಷ್ಮೀಮ್ ॥

'ಹಂಸಸಂದೇಶಕ್ಕೆ' ಶಿನ್ನಾಮು ಶ್ರೀನಿವಾಸ ಪಾಟ್ರಾಚಾರ್ಯ, ವಾತ್ಸ್ಯ ನಡಾದೂರು ರಂಗರಾಜಾಚಾರ್ಯ, ಶ್ರೀಕೃಷ್ಣಬ್ರಹ್ಮತಂತ್ರಪರಕಾಲ ಸ್ವಾಮಿಗಳು, ಮಯಮೇಲುಪಾಳ್ಯಂ ಶ್ರೀರಂಗಾಚಾರ್ಯ, ಶ್ರೀಭಾಷ್ಯಂ ಶ್ರೀನಿವಾಸಚಾರ್ಯ ಇವರ ಸಂಸ್ಕೃತವ್ಯಾಖ್ಯಾನಗಳೂ, ಶಿನ್ನಾಮು ಶ್ರೀನಿವಾಸಪಾಟ್ರಾಚಾರ್ಯರ ತಮಿಳು ವ್ಯಾಖ್ಯಾನವೂ, ಗೋಪಾಲಕೃಷ್ಣಮಾಚಾರ್ಯರ ಕನ್ನಡ ಪ್ರತಿಪಾದಾರ್ಥ ತಾತ್ಪರ್ಯವೂ ಇವೆ. ರೈಸರ ಗ್ರಂಥಸೂಚಿಯಲ್ಲಿ ಅಪ್ಪಯ್ಯದೀಕ್ಷಿತವಿರಚಿತ ವ್ಯಾಖ್ಯಾನವೊಂದೂ ನಿರ್ದೇಶಿತವಾಗಿದೆ.

## ಸುಭಾಷಿತನೀವೀ :

ಸುಭಾಷಿತಗಳಿಗೆ ಮೂಲಧನರೂಪವಾದದ್ದು ಈ ಗ್ರಂಥ. ಇದನ್ನು ತಮ್ಮ ಆಶ್ರಿತನೂ ಮಾಧವಾತ್ಮಜನೂ ಆದ ಸರ್ವಜ್ಞ ಸಿಂಗಪ್ಪನ ಸದುಪದೇಶಬೋಧನಾರ್ಥವಾಗಿ ಆಚಾರ್ಯರು ರಚಿಸಿ ಕಳುಹಿಸಿದರೆಂದು 'ವೈಭವಪ್ರಕಾಶಿಕೆ' ಯಲ್ಲಿ ಉಕ್ತವಾಗಿದೆ. ಇದನ್ನು 'ತತ್ತ್ವಸಂದೇಶ' 'ರಹಸ್ಯಸಂದೇಶ' 'ತತ್ತ್ವಸಂದೇಶವಿವರಣೆ' ಮತ್ತು 'ರಹಸ್ಯಸಂದೇಶವಿವರಣೆ' ಎಂಬುವುಗಳನ್ನು ರಚಿಸಿ ಧಾರ್ಮಿಕ ಮತ್ತು ದಾರ್ಶನಿಕ ವಿವರಣೆಗಳನ್ನೊಳಗೊಂಡ ಮುಂದಿನ ಶ್ಲೋಕದೊಡನೆ ಆವನಿಗೆ ಕಳುಹಿಸಿಕೊಟ್ಟರಂತೆ.

ಸತ್ವಸ್ಥಾನ್ನಿಭೃತಂ ಪ್ರಸಾದಯ ಸತಾಂ
ವೃತ್ತಿಂ ವ್ಯವಸ್ಥಾಪಯ
ತ್ರಸ್ಯಬ್ರಹ್ಮವಿದಾಗಸ್ತೃಣಮಿವ ತ್ರೈವರ್ಗ-
ಕಾನ್ ಭಾವಯ
ನಿತ್ಯೇ ಶ್ರೀಶನಿ ನಿಕ್ಷಿಪನ್ನಿಜ ಭರಂ ಸರ್ವಂ ಸಹೇ
ಶ್ರೀಸಖೇ
ಧರ್ಮಂ ಧಾರಯ ಚಾತಕಸ್ಯ ಕುಶಲಿನ್
ಧಾರಾಧರೈಕಾಂತಿನಃ ॥

'ಸುಭಾಷಿತನೀವಿ'ಯು ೧೪೪ ಶ್ಲೋಕಗಳನ್ನೊಳಗೊಂಡ ೧೨ ಪದ್ಧತಿಗಳನ್ನುಳ್ಳದಾಗಿದೆ. ಒಂದೊಂದು ಪದ್ಧತಿಯಲ್ಲಿಯೂ ೧೨ ಶ್ಲೋಕಗಳಿವೆ. ಮೊದಲನೆಯ ನಿಪುಣ, ದೃಪ್ತ, ಖಳ, ದುರ್ವೃತ್ತ ಅಸೇವು ಎಂಬ ಆಯ್ದು ಪದ್ಧತಿಗಳಲ್ಲಿ ದುಷ್ಟರ ದುರ್ಗುಣ ನಿರೂಪಣೆಯೂ, ಮುಂದಿನ ಮಹಾಪುರುಷ, ಸಮುಚಿತ್ತ, ಸದಾಶ್ರಿತ, ನೀತಿಮತ, ಧನಧಾನ್ಯ ಎಂಬ ಆಯ್ದು ಪದ್ಧತಿಗಳಲ್ಲಿ ಸಜ್ಜನರ ಸದ್ಗುಣಪ್ರಶಂಸೆಯೂ, ಹನ್ನೊಂದನೆಯದರಲ್ಲಿ ಸತ್ಕವಿಗಳ ಸ್ವಭಾವವರ್ಣನೆಯೂ ಹನ್ನೆರಡರಲ್ಲಿ ಪರೀಕ್ಷಕ ಪದ್ಧತಿಯೂ ಕ್ರಮವಾಗಿವೆ. ಇದು ಭರ್ತೃಹರಿಯ ಶತಕಗಳ ಮಾದರಿಯಲ್ಲಿದ್ದರೂ ಅದಕ್ಕಿಂತಲೂ ಉತ್ತಮವಾಗಿದೆ. ಇದರ ಕೆಲವು ಶ್ಲೋಕಗಳು 'ಸಂಕಲ್ಪಸೂರ್ಯೋದಯ'ದಲ್ಲಿಯೂ ಅನುವದಿತವಾಗಿವೆ. ಇದಕ್ಕೆ ಶ್ರೀನಿವಾಸರೆಂಬುವರ 'ರತ್ನಪೇಟಿಕಾ' ಎಂಬ ವ್ಯಾಖ್ಯಾನವೂ ಪಟ್ಟಿತಾತಾಚಾರ್ಯರ ಮತ್ತೊಂದು ಸಂಸ್ಕೃತವ್ಯಾಖ್ಯಾನವೂ ಇವೆ.

## ಪಾದುಕಾಸಹಸ್ರ

ಇದು ಶ್ರೀರಂಗನಾಥ ಪಾದುಕಾವಿಷಯಕವಾದದು. ಅರಿಹಿಯಮಣವಾಳ ಜೀಯರೆಂಬುವರು ಆಚಾರ್ಯರನ್ನು ಸ್ಪರ್ಧೆಗೆ ಕರೆದಾಗ ಒಂದ. ರಾತ್ರಿಯಲ್ಲಿ ರಚಿತವಾಯಿತೆಂದೂ, ಇದರಿಂದ ಇವರ ಕವಿತಾರ್ಕಿಕಸಿಂಹ ಎಂಬ ಪ್ರಶಸ್ತಿ ಖಚಿತವಾಯಿತೆಂದೂ ಸಾಂಪ್ರದಾಯಕ ಕಥೆಯಿದೆ. ಇದರಲ್ಲಿ ೧೦೦೮ ಶ್ಲೋಕಗಳಿವೆ. ಅವು ಕ್ರಮವಾಗಿ ಪ್ರಸ್ಥಾನಸಮಾಖ್ಯ, ಪ್ರಭಾವ, ಸಮರ್ಪಣ, ಪ್ರತಿಪ್ರಸ್ಥಾನ, ಅಧಿಕಾರಪರಿಗ್ರಹ, ಅಭಿಷೇಕ, ನಿರ್ಯಾತನಾ, ವೈತಾಳಿಕ, ಶೃಂಗಾರ, ಸಂಚಾರ, ಪುಷ್ಪ, ಪರಾಗ, ನಾದ, ರತ್ನಸಾಮಾನ್ಯ, ಬಹುರತ್ನಪದ್ಮರಾಗ, ಮುಕ್ತಾ, ಮರಕತ, ಇಂದ್ರನೀಲ, ಬಿಂಬಪ್ರತಿಬಿಂಬ, ಕಾಂಚನ, ಶೇಷ, ದ್ವಂದ್ವ, ಸನ್ನಿವೇಶ, ಯಂತ್ರಿಕಾ, ರೇಖಾ, ಸುಭಾಷಿತ, ಪ್ರಕೀರ್ಣ, ಚಿತ್ರ, ನಿರ್ವೇದ, ಫಲ, ಎಂಬ ೩೨ ಪದ್ಧತಿಗಳಾಗಿ ವಿಭಾಗವಾಗಿವೆ. ಇದು ಶ್ರೀಹಯಗ್ರೀವರಿಂದಲೇ ರಚಿತವಾಯಿತೆಂದು ಸಂಪ್ರದಾಯಸ್ಥರ ನಂಬಿಕೆ. ರಾಮಾಯಣದ ಕತೆ ಇದರಲ್ಲಿ ಪ್ರಕಾರಾಂತರವಾಗಿ ವರ್ಣಿತವಾಗಿದೆ. ಇಲ್ಲಿ ಆಚಾರ್ಯರು ದ್ರವಿಡೋಪನ್ನಿಷನ್ನಿರ್ಮಾಪಕರಾದ ಶಠಾರಿ ಮುನಿಗಳು ಶ್ರೀರಂಗನಾಥನ ಪಾದುಕೆಯ ಅವತಾರವಿಶೇಷವೆಂದು ಉಭಯತ್ರ ಸಮನ್ವಯ ಮಾಡಿ ಸಹಸ್ರಗಾಥಾಸಂಖ್ಯಾಸಮವಾಗಿಯೇ ಈ ಗ್ರಂಥವನ್ನು ರಚಿಸಿ, ಚಮತ್ಕಾರವಾಗಿ ಉಳಿದ ಎಂಟು ಶ್ಲೋಕಗಳು ಉಪಸಂಹಾರ ರೂಪವೆಂದು ತಿಳಿಸಿ, ಗ್ರಂಥಪೂರ್ಣಮಾಡಿದ್ದಾರೆ. ಇಲ್ಲಿಯ ಚಿತ್ರಪದ್ಧತಿಗೆ ಆಚಾರ್ಯರ ವ್ಯಾಖ್ಯಾನವಿಲ್ಲದಿದ್ದರೆ ಅರ್ಥವಾಗುತ್ತಿರಲಿಲ್ಲವೆಂದು ಕಾಣುತ್ತದೆ. ಆಚಾರ್ಯರು ಈ ಗ್ರಂಥವನ್ನು ಭಗವಂತನಿಗೆ ನಿವೇದಿಸುವ ಗ್ರಂಥದ ಕೊನೆಯ ಈ ಕೆಳಗಿನ ಶ್ಲೋಕವು ಸರ್ವದಾ ಚಿಂತನೀಯವಾಗಿದೆ.

ಅಂಶೀಕುರ್ವಂತ್ವಕಲುಷಧಿಯೋ
ನಿತ್ಯಮಧ್ಯಾತ್ಮವಿದ್ಯಾ
ಮಾದ್ಯೋ ಧರ್ಮಃ ಸ್ಪೃಶತು ವಸುಧಾಮಾ
ಶಿಷಃ ಪಾರವರ್ತೀ ।
ದೇವಃ ಶ್ರೀಮಾನ್ನಿರವಧಿದಯಾಸಿಂಧುರಸ್ಮಿ
ಪ್ರಬಂಧೇ
ವಕ್ತಾ ಶ್ರೋತಾ ವಚನವಿಷಯಃ ಪ್ರೀಯತಾಂ
ವಾಸುದೇವಃ ॥

'ಪಾದುಕಾಸಹಸ್ರಕ್ಕೆ' ಭಾರದ್ವಾಜಂ ಶ್ರೀನಿವಾಸಾಚಾರ್ಯರ ಸಂಸ್ಕೃತವ್ಯಾಖ್ಯಾನವಿದೆ. ಅಪ್ಪಯ್ಯದೀಕ್ಷಿತರೂ ವ್ಯಾಖ್ಯಾನವನ್ನು ರಚಿಸಿರುವರಂತೆ. ಕನ್ನಡದಲ್ಲಿ ಹರಿಹರಪುರಂ ಗೋಪಾಲಾಚಾರ್ಯರ ಪ್ರತಿಪದಾರ್ಥತಾತ್ಪರ್ಯಗಳಿವೆ.



# ಯುವವಾಣಿ

# ಯುವಶಕ್ತಿ ಪ್ರತೀಕ:

## ಆಂಜನೇಯಸ್ವಾಮಿ ದೇವಾಲಯ



ಪುರಾಣ, ರಾಮಾಯಣ ಮುಂತಾದ ಹಿಂದೂ ಧರ್ಮಗ್ರಂಥಗಳಲ್ಲಿ ಪ್ರಸಿದ್ಧನಾದ ದೇವ ವಾಯು ಪುತ್ರಆಂಜನೇಯ,ರಾಕ್ಷಸ ರಾವಣನಿಂದ ಅಪಹೃತ ಳಾಗಿದ್ದ ಸೀತೆಯನ್ನು ಕರೆದೊಯ್ಯಲು ಭಾರತ ದಿಂದ ಶ್ರೀ ಲಂಕಾದವರೆಗೆ ವಾನರ ಸೈನ್ಯದಿಂದ ಸೇತುವೆಯನ್ನೇ ನಿರ್ಮಿಸಿದ ಒಬ್ಬ ಮಹಾನ್ ವ್ಯಕ್ತಿ. ಅವನು ಧೈರ್ಯ ಮತ್ತು ಸ್ಥೈರ್ಯ ಗಳಿಂದ ತಾನೊಬ್ಬ ಮಹಾನ್ ದೇವತೆ ಎಂದು ಪರಿಗಣಿಸಲ್ಪಟ್ಟಿದ್ದಾನೆ.

ಆಂಜನೇಯ ದೇವಸ್ಥಾನಗಳು ಈಗಾಗಲೇ ಭಾರತದಲ್ಲಿ ಮಾತ್ರವಲ್ಲದೆ ಜಪಾನ್ ದೇಶದಲ್ಲಿ ಕೂಡ ನಿರ್ಮಿತವಾಗಿ ಪ್ರಖ್ಯಾತಿ ಹೊಂದಿವೆ.

ಬೆಂಗಳೂರಿನ ಮಹಾಲಕ್ಷ್ಮಿಪುರದ ಬಡಾವಣೆ ಯಲ್ಲಿ ಇತ್ತೀಚೆಗೆ ನಿರ್ಮಿತವಾದ ಹನುಮಾನ್ ದೇವಸ್ಥಾನ ಮಿಕ್ಕೆಲ್ಲ ದೇವಸ್ಥಾನಗಳನ್ನೂ ಸೋಲಿಸಿ ನಿಂತಿರುವಂತೆ ಶೋಭಿಸುತ್ತಿದೆ. ಪ್ರಾಕೃ ತಿಕ ಸೌಂದರ್ಯ ಮತ್ತು ಪ್ರಶಾಂತ ವಾತಾ ವರಣದಿಂದ ಕೂಡಿರುವುದೇ ಈ ಬಡಾವಣೆಯ ವೈಶಿಷ್ಟ್ಯ. ಈ ಬಡಾವಣೆಯಲ್ಲಿ ಬಂಡೆಗಳು ಪರ್ವತದಂತೆ ಎದ್ದು ಕಾಣುತ್ತವೆ. ಈ ಪರ್ವತದ ಒಂದು ಮೂಲೆಯಲ್ಲಿ 22 ಅಡಿ ಎತ್ತರದ, 15 ಅಡಿ ಅಗಲದ ಮತ್ತು ನಾಲ್ಕು ಅಡಿ ದಪ್ಪವಿರುವ ಒಂದು ಸುಂದರ ಮೂರ್ತಿ ಇಡೀ ಮಹಾಲಕ್ಷ್ಮೀ ಪುರದ ಬಡಾವಣೆಗೇ ಎದ್ದು ಕಾಣುವಂತೆ ನಿಂತಿದೆ. ತಮಿಳುನಾಡಿನ ಸುಚೀಂದ್ರುಮ್‌ನಲ್ಲಿ 18 ಅಡಿ ಎತ್ತರದ ಮತ್ತು ಕರ್ನಾಟಕದ ಮುಳಬಾಗಿಲಿನಲ್ಲಿ 16 ಅಡಿ ಎತ್ತರದ ಮೂರ್ತಿಗಳು ನಿರ್ಮಿತವಾಗಿವೆ. ಶ್ರವಣಬೆಳಗೊಳದ ಗೋಮಟೇಶ್ವರನನ್ನು ಬಿದಂತೆ ಭಾರತದಲ್ಲಿ ಇದೊಂದೇ ಅತ್ಯಂತ ಎತ್ತರದ ಶಿಲ್ಪ ಎಂದು ಹೇಳಬೇಕು.

ಭಾರತದ ಸ್ವಾತಂತ್ರ್ಯದ ಹಿಂದಿನಕಥೆ ಎಂದರೆ ಬಹಳ ಹಿಂದೆ ಮೈಸೂರಿನ ಆಗಿನ ಸೈನಿಕರು ಈ ಬಂಡೆಯನ್ನು ಗುಂಡಿನ ಗುರಿಯ ಅಭ್ಯಾಸ ಕ್ಕಾಗಿಯೇ ಮೀಸಲಾಗಿಟ್ಟಿದ್ದರು. ಅಂದಿನ ಮೈಸೂರಿನ ದಿವಾನ್. ಸರ್. ಇಸ್ಮಾಯಿಲ್ ಆ ದಾರಿಯಲ್ಲಿ ಹೋಗುತ್ತಿದ್ದಾಗ ಒಂದು ದಿನ ಆ ಬಂಡೆಯಿಂದ ಒಂದು ಹೊಳೆಯುತ್ತಿರುವ ತೇಜಸ್ಸು ಕಾಣಿಸಿತು. ಅಂದಿನಿಂದ ಆತ ಅಲ್ಲಿ ಗುಂಡು ಹೊಡೆಯುವುದನ್ನು ನಿಲ್ಲಿಸಿದನು.

ಅಂದಿನಿಂದ ಆ ಬಂಡೆಯು ಹಾಗೆಯೇ ಉಳಿ ಯಿತು. ಬಹಳ ವರ್ಷಗಳು ಈ ಬಡಾವಣೆಯಲ್ಲಿ ಸುತ್ತಮುತ್ತಲಿನ ಪ್ರದೇಶಗಳು ಮುಂದುವರಿದಂತೆ ಕಾಣಲಿಲ್ಲ. ಮುಂದಿನ ದಿನಗಳಲ್ಲಿ ಮನೆಗಳು ಕಟ್ಟಲ್ಪಟ್ಟು ಜನವಸತಿ ಪ್ರಾರಂಭವಾಯಿತು. ಜನವಸತಿ ಪ್ರಾರಂಭವಾದರೂ ಈ ದೊಡ್ಡ ಬಂಡೆಯ ಕಡೆ ಜನರ ಗಮನ ಹರಿಯಲಿಲ್ಲ. ಬಂಡೆ ಹಾಗೆಯೇ ಉಳಿಯಿತು.

ಅನಾಘ್ರಾತ ಪುಷ್ಪದಂತೆ ಉಳಿದಿದ್ದ ಈ ಬಂಡೆಯು ಏಳು ವರ್ಷದ ಹಿಂದೆ ಒಬ್ಬ ಯುವಕ ಹನುಮಂತರಾಯಪ್ಪ ಎಂಬುವವರ ಕಣ್ಣಿಗೆ ಬಿದ್ದು ಅಕ್ಕಪಕ್ಕದ ಜನರ ಸಹಾಯದಿಂದ ಈ ಬಂಡೆಯ ಮೇಲೆ ಆಂಜನೇಯನ ಒಂದು ದೊಡ್ಡ ಚಿತ್ರವನ್ನು ಬಂಡೆಯ ಪೂರ್ತಿ ಬರೆದರು. ಅದು ಪೂರ್ಣ ವಾಗುತ್ತಲೇ ನಿತ್ಯಪೂಜೆ, ಕಾರ್ಯ ಕ್ರಮಗಳು ಪ್ರಾರಂಭವಾಗಿ ಹೆಚ್ಚು ಹೆಚ್ಚು ಜನರನ್ನು ಆಕರ್ಷಿಸಿದವು.

ಭಕ್ತಾದಿಗಳ ಉತ್ಸಾಹ ಪಡೆದ ಅಕ್ಕಪಕ್ಕದ ಯುವಕರು ಮತ್ತು ಗೆಳೆಯರು "ಪ್ರಸನ್ನ ವೀರಾಂಜನೇಯ ಸೇವಾ ಸಮಿತಿ" ಎಂಬ ಸಮಿತಿ ಯನ್ನು ರಚಿಸಿ ಆಂಜನೇಯನ ಕೆತ್ತನೆ ಕೆಲಸವನ್ನು ಪ್ರಾರಂಭಿಸತೊಡಗಿದರು.

ಏತನ್ಮಧ್ಯೆ ಸಮಿತಿಯು ಅನೇಕ ಎಡರು ತೊಡರುಗಳನ್ನು ಎದುರಿಸಬೇಕಾಯಿತು. ಕೆಲ ವರು ಕೆಲಸ ಕಷ್ಟವೆಂದು ಹೇಳಿದರು. ಮತ್ತೆ ಕೆಲ ವರು ಬಂಡೆಯಲ್ಲಿ ದುಷ್ಟ ಶಕ್ತಿಗಳಿರಬಹುದೆಂದು ಸಂದೇಹಿಸಿ ಅದರಲ್ಲಿ ಕೆತ್ತನೆ ಕೆಲಸ ಮಾಡುವುದು ಸರಿಯಲ್ಲ ಎಂದರು.

ಕೆತ್ತನೆಯ ಕೆಲಸಕ್ಕೆ ಶಿಲ್ಪಿಯನ್ನು ಹುಡುಕು ವುದು ಸುಲಭವಾದ ಕೆಲಸವಾಗಲಿಲ್ಲ. ಕೊನೆಗೆ ಹೆಸರಾಂತ ತಂಜಾವೂರಿನ ಶಿಲ್ಪಿ ಮುಂದೆ ಬಂದು ಈ ಕಾರ್ಯವನ್ನು ರೂ. 20,000 ಶುಲ್ಕದ ಮೇರೆಗೆ ಒಪ್ಪಿಕೊಂಡರು. 8 ಮಂದಿ ಕೆಲಸಗಾರರ ಸಹಾಯದಿಂದ ಕೆಲಸ 1973 ರ ಅಕ್ಟೋಬರ್ ತಿಂಗಳಿನಲ್ಲಿ ಪ್ರಾರಂಭವಾಯಿತು. ಮೂರ್ತಿಯು ದಕ್ಷಿಣಕ್ಕೆ ಮುಖ ಮಾಡಿ ನಿಂತಿರಬಾರದು– ಅದು ಉತ್ತರದಲ್ಲಿರಬೇಕು ಎಂದು ಕಲವರ ಅಭಿಮತ ವಾಗಿತ್ತು. ನಿಷ್ಣಾತರಾದ ಕೆಲವರು ಮೂರ್ತಿಯು ದಕ್ಷಿಣಕ್ಕೆ ಇರಬೇಕು ಎಂದರು. ಎಂಟು ತಿಂಗಳು ಗಳ ನಂತರ ಕೆಲಸ 1974 ರ ಜುಲೈ ತಿಂಗಳಿನಲ್ಲಿ ಮತ್ತೆ ಪ್ರಾರಂಭವಾಯಿತು. ಕೆಲಸ ಮುಗಿಯಲು ಒಂದು ವರ್ಷ ಬೇಕಾಯಿತು. 14 ಅಡಿ ಇದ್ದ ಜಾಗವನ್ನು ಭರ್ತಿ ಮಾಡಲಾಯಿತು. ಸೌಂದ ರ್ಯದ ಹಾಗೂ ಬಣ್ಣ ಬಣ್ಣದ ಮರಗಳಿಂದ ಕೂಡಿದ ಒಂದು ಸುಂದರ ಉದ್ಯಾನವನಕ್ಕೆ ಮಾರ್ಪಾಡಾಯಿತು. ಬಣ್ಣ ಬಣ್ಣದ ತೂಗಾಡುವ ಮರಗಳಿಂದ ಕೂಡಿರುವ ಈ ಒಂದು ಉದ್ಯಾನ ವನ ಈಗ ಆಕರ್ಷಣೀಯವಾಗಿದೆ.

ಶಿಲ್ಪದ ಪ್ರಾಣ ಪ್ರತಿಷ್ಠಾಪನೆಯನ್ನು 1976 ರ ಜುಲೈ 7 ರಂದು ಆಚರಿಸಲಾಯಿತು. ಸಹಸ್ರಾರು ಮಂದಿ ಭಕ್ತಾದಿಗಳು ನೆರೆದಿದ್ದು

(24 ನೇ ಪುಟನೋಡಿ)

**ರಂಗಸುತ**





# ಗೃಹಲಕ್ಷ್ಮಿ



## ಶ್ರೀ ತುಳಸಿಯ ಹಿರಿಮೆ

—**ಶ್ರೀನಿವಾಸಮಠದ** ಬಿ. ಎಸ್. ಸಿ.

ನಮ್ಮ ಭರತ ಖಂಡದಲ್ಲಿ, ಅಷ್ಟೇ ಏಕೆ, ವಿಶ್ವದ ವಿವಿಧ ದೇಶಗಳಲ್ಲಿ ಶ್ರೀ ತುಳಸಿಯ ಗಿಡವನ್ನು ಪರಮ ಪವಿತ್ರವಾದುದೆಂದು ತಿಳಿದು ಪೂಜಿಸಲಾಗುತ್ತಿದೆ. ಗ್ರೀಕ್ ದೇಶದ ಚರ್ಚುಗಳಲ್ಲಿ ಇದನ್ನು ಪವಿತ್ರವೆಂದು ತಿಳಿಯಲಾಗಿದೆ. ಮೆಡಿಟರೇನಿಯನ್ ಸಮುದ್ರದಡದ ಉಸುಕು ಭೂಮಿಯಲ್ಲಿ ಇದನ್ನು 'ಸ್ವಾಸ್ಥ್ಯಪ್ರದ' ಗಿಡವೆಂದು ತಿಳಿಯಲಾಗಿದೆ.

ಸ್ಕಾಂದಪುರಾಣ, ಪದ್ಮಪುರಾಣ, ಬ್ರಹ್ಮವೈವರ್ತಪುರಾಣ, ಗರುಡಪುರಾಣ ಮುಂತಾದವುಗಳಲ್ಲಿ ತುಳಸಿಯ ಮಹಿಮೋಪೇತವಾದ ಪವಿತ್ರ ಚರಿತ್ರೆಯನ್ನು ತಿಳಿಯಬಹುದಲ್ಲದೇ ಶ್ರೀ ಕಾಶೀ ಖಂಡ ಎಂಬ ಗ್ರಂಥವೂ ತುಳಸಿಯ ಗುಣಗಾನ ಮಾಡುತ್ತದೆ.

ಶ್ರೀವಿಷ್ಣು ನೇತ್ರಾಂಬು ಸಂಭವಳಾದ, ವಿಷ್ಣುಪ್ರಿಯಳಾದ ಶ್ರೀ ತುಳಸಿಯು ಜಾಂಬವತೀದೇವಿಗೆ ಸಮಾನಳೆನಿಸುವಳು. ರಮಾ ಆವೇಶಯುಕ್ತಳಾದ ಇವಳು 7 ನೆಯ ಕಕ್ಷೆಯಲ್ಲಿ ಬರುವ ಸೌಪರಣಿ, ವಾರುಣಿ, ಪಾರ್ವತಿಯರಿಗಿಂತ ಎರಡು ಗುಣ ಅಧಿಕಳು.

ಹಿಂದೊಮ್ಮೆ ದೇವದಾನವರು ಸೇರಿ 'ಅಮೃತ' ಕ್ಕಾಗಿ ಮಂದರಾಚಲವನ್ನು ಕಡೆಗೋಲನ್ನಾಗಿ ಮಾಡಿ ಕ್ಷೀರಸಮುದ್ರವನ್ನು ಮಥಿಸಿದರು. ಆಗ ಅಮೃತಕಲಶವನ್ನು ಧರಿಸಿದ ಪರಮಾತ್ಮನು ಧನ್ವಂತರಿರೂಪದಿಂದ ಪ್ರಕಟನಾದನು. ಅನಂತರ ಮಹಾಲಕ್ಷ್ಮಿಯು ಆವಿರ್ಭೂತಳಾದಳು. ಇವಳು ಸಕಲದೋಷದೂರನೂ, ಸರ್ವ ಶುಭಗುಣಗಣಾರ್ಣವನೂ ಆದ ಶ್ರೀಮನ್ನಾರಾಯಣನೇ ತನಗೆ ಯೋಗ್ಯ ವರನೆಂದು ತಿಳಿದು ಅವನ ಕಂಠದಲ್ಲಿ ಪದ್ಮಮಾಲೆಯನ್ನು ಹಾಕಿ ಅಲಂಕರಿಸಿ, ಅವನ ಎಡಪಕ್ಕದಲ್ಲಿ ಕುಳಿತಳು. ಆ ವಿವಾಹ ಕಾಲದಲ್ಲಿ ಹುಟ್ಟಿದ ಪರಮಾತ್ಮನ ಆನಂದಬಾಷ್ಪವು ಅಮೃತ ಕಲಶದಲ್ಲಿ ಬಿದ್ದು ಭೂಮಿಯಲ್ಲಿ ಉದುರಲು ಶ್ರೀ ತುಳಸೀದೇವಿಯು ಜನಿಸಿದಳು. ತುಳಸೀ ವೃಕ್ಷವು ಉದ್ಭವಿಸಿ ನಿಂತಿತು. ಶ್ರೀ ತುಳಸಿಯ ದರ್ಶನದಿಂದ ಆನಂದಿತರಾದ ದೇವತೆಗಳು ಜಯಜಯಕಾರವನ್ನು ಮಾಡಿದರು. ಆಗ ಪರಮಾತ್ಮನು ತುಳಸೀದೇವಿಗೆ ಸರ್ವ ಪೂಜ್ಯತ್ವಾದಿ ಮಹಾವರಗಳನ್ನು ದಯಪಾಲಿಸಿದನು. ಇದನ್ನು ನಮ್ಮ ದಾಸವರರಾದ ಶ್ರೀ ವಿಜಯದಾಸರು "ಶ್ರೀ ತುಳಸಿಯ ಸೇವಿಸಿ" ಎಂಬ ಉದಯರಾಗದಲ್ಲಿ ಹೀಗೆ ತಿಳಿಸಿಕೊಟ್ಟಿದ್ದಾರೆ.

ಸುಧೆಗಡಲ ಮಥಿಸುವ ಸಮಯದಲ್ಲಿ ವೈದ್ಯನಾಗಿ ಪದುಮನಾಭನು ತಾನು ಉದುಭವಿಸಿ ಬರಲಂದು । ಉದರಿದವು ಕಣ್ಣಿಂದ ಉದಕ ಉತ್ಸಹದಿಂದಲದೆ ತುಳಸಿನಾಮವಾಗಿ। ತ್ರಿದಶರೊಂದಿಸುತ ಮೋದದಿಂ ಕೊಂಡಾಡಿದರು ಒದಗಿ ಸುಜನರು ತಮ್ಮ ಸದನದಲ್ಲಿ ನಿತ್ಯ ಸತ್ಪದವಿಗೆ ಸಿದ್ಧವೆಂದು ಮುದದಿಂದ ತಿಳಿದು ವೃಂದಾವನವ ರಚಿಸಿದರೈಯ ||

ಇಂಥ ಪೂಜ್ಯಳಾದ ಶ್ರೀ ತುಳಸಿಯನ್ನು ಸರ್ವದಾ ನಿತ್ಯ ಪ್ರಾತಃಕಾಲದಲ್ಲಿ ಕೆಳಗಿನಂತೆ ಸ್ತೋತ್ರ ಮಾಡಬೇಕು.

ಪ್ರಸೀದ ತುಲಸೀದೇವಿ ಪ್ರಸೀದ ಹರಿವಲ್ಲಭೇ
ಕ್ಷೀರೋದ ಮಥನೋದ್ಭೂತೇ ತುಲಸಿ ತ್ವಾಂ
ನಮಾಮ್ಯಹಂ ||

ಶ್ರೀ ತುಳಸಿಯು ಪರಮಾತ್ಮನಿಗೆ ಎಷ್ಟು ಪ್ರೀತಿ ಪಾತ್ರಳು ? ಎಂಬುದನ್ನು ನಮ್ಮ ದಾಸಶ್ರೇಷ್ಠ ಶ್ರೀ ಪುರಂದರದಾಸರು ತಿಳಿಸಿಕೊಡುತ್ತಾರೆ:

ಎಲ್ಲ ಸಾಧನವಿದ್ದು ತುಳಸಿ ಇಲ್ಲದ ಪೂಜೆ
ಒಲ್ಲನೋ ಶ್ರೀಹರಿಕೊಳ್ಳನೋ ।

ಮಂತ್ರಮಹಾಮಂತ್ರ ಪುರುಷ ಸೂಕ್ತಗಳಿದ್ದು
ತಂತು ತಪ್ಪದೇ ತಂತ್ರಸಾರವಿದ್ದು ।
ಸಂತತ ಸುಖಸಂಪೂರ್ಣನ ಪೂಜೆಗ ।
ತ್ಯಂತಪ್ರಿಯಳಾದ ತುಳಸಿ ಯಿಲ್ಲದಪೂಜೆ ।
ಒಲ್ಲನೋ ಶ್ರೀಹರಿಕೊಳ್ಳನೋ

ಕಮಲಮಲ್ಲಿಗೆ ಜಾಜಿ ಸಂಪಿಗೆಕೇದಿಗೆ ।
ವಿಮಲಘಂಟೆಪಂಚವಾದ್ಯವಿದ್ದು ।
ಅಮಲ ಪಂಚಭಕ್ಷ್ಯಪರಮಾನ್ನಗಳಿದ್ದು ಕಮಲ
ನಾಭನು ಶ್ರೀ ತುಳಸಿಯಿಲ್ಲದೆ ಪೂಜೆ।
ಒಲ್ಲನೋ ಶ್ರೀಹರಿಕೊಳ್ಳನೋ

ಪೂಜೆಯ ಮಾಡದೆ ತುಳಸಿ ಮಂಜರಿಯಿಂದ ।
ಮೂಜಗದೊಡೆಯ ಮುರಾರಿಯನು ।
ರಾಜಾಧಿರಾಜನೆಂಬ ಮಂತ್ರವೃಷ್ಟಿಗಳಿಂದ ।
ಪೂಜಿಸಿದರೂ ಒಲ್ಲ ಪುರಂದರ ವಿಠಲನು ।

ಒಟ್ಟಿನಲ್ಲಿ ತುಳಸಿ ಇಲ್ಲದ ಶ್ರೀಹರಿಪೂಜೆ ವ್ಯರ್ಥವೇಸರಿ ಎನ್ನುತ್ತಾರೆ.

ಈ ತುಳಸಿಗೆ ಇಷ್ಟು ಪ್ರಾಧಾನ್ಯತೆ ಏಕೆ ಎಂದು ಕೇಳಿದರೆ–

ವೃಂದಾವನವೇ ಮಂದಿರವಾಗಿಹ। ಇಂದಿರೆ ಶ್ರೀತುಳಸಿ। ನಮ್ಮ ನಂದನ ಮುಕುಂದಗೆ ಪ್ರಿಯವಾದ। ಚೆಂದಾದ ಶ್ರೀ ತುಲಸಿ।

ಎಂಬುದಾಗಿ ವಿವರಿಸಿ,

ತುಳಸೀವನದಲ್ಲಿ ಹರಿಯಿರುವನೆಂಬುದ। ಶ್ರುತಿ ಸಾರುತಿದೆ ಕೇಳಿ। ತುಳಸೀ ದರ್ಶನದಿ। ದುರಿತ ಗಳೆಲ್ಲ ಹೋಗೋದು ಕೇಳಿ। ತುಳಸಿ ಸ್ಪರ್ಶನ ದಿಂದ ದೇಹ ಪಾವನವೆಂದು। ನೀವೆಲ್ಲ ತಿಳಿದು ಕೇಳಿ। ತುಳಸೀ ಸ್ಮರಣೆ ಮಾಡಿ ಸಕಲಿಷ್ಟವ ಪಡೆದು। ಸುಖದಲಿ ನೀವು ಬಾಳಿ।

—ಎಂಬುದಾಗಿ ಉಪದೇಶಿಸಿ. ಈ ತುಳಸಿ ಮೃತ್ತಿಕೆ, ಮಾಲೆ ಧರಿಸಿದವಗೆ ಮುಕ್ತಿಮಾರ್ಗವು ತಾನಾಗಿಯೇ ಹೊಂದಲ್ಪಡುವುದು ಎನ್ನುತ್ತಾರೆ.

ಮೂಲಮೃತ್ತಿಕೆಯನು ಧರಿಸಿದ ಮಾತ್ರದಿ। ಮೂರುಲೋಕ ವಶವಾಗುವುದು। ಮಾಲೆಗಳನೆ ಕೊರಳಲ್ಲಿಬ್ಬ ಮನುಗೆಟ್ಟ। ಮುಕ್ತಿಮಾರ್ಗವನೀಯುವದು। ಕಾಲಕಾಲಗಳಲಿ ಮಾಡಿದ ದುಷ್ಕರ್ಮ ಕಳೆದು ಬಿಸುಟು ಹೋಗುವದು।

ಅಲ್ಲದೇ ಶ್ರೀ ತುಳಸಿಯು ಸಕಲ ಐಶ್ವರ್ಯ, ಪುತ್ರಾದಿ ಸಂಪತ್ತುಗಳನ್ನು ದಯಪಾಲಿಸುತ್ತಾಳೆ ಎಂದು ಹೀಗೆ ವಿವರಿಸುತ್ತಾರೆ—

ಧರೆಯೊಳು ಸುಜನರ ಮರೆಯದೆ ಸಲಹುವ। ವರಲಕ್ಷ್ಮಿ ತುಳಸಿ। ಪರಮಭಕ್ತರ ಪಾಪಗಳೆಲ್ಲ ತರಿದು। ಪಾವನ ಮಾಡಿದಳು ತುಳಸಿ। ಸಿರಿ ಆಯು ಪುತ್ರಾದಿ ಸಂಪತ್ತುಗಳನ್ನಿತ್ತು। ಹರುಷ ವೀವಳು ತುಳಸಿ। ಪುರಂದರ ವಿಠಲನ್ನ ಚರಣ ಕಮಲದ। ಸ್ಮರಣೆಕೊಡುವಳು ತುಳಸಿ, ಎನ್ನುತ್ತಾರೆ 'ಕಲ್ಯಾಣಂ ತುಳಸಿ ಕಲ್ಯಾಣಂ' ಎಂಬ ಪದ್ಯವೊಂದರಲ್ಲಿ ತುಳಸೀ ವಿವಾಹವನ್ನು ಆಚರಿಸುವ ದಿನವನ್ನು ತಿಳಿಸಿದ್ದಾರೆ.

ಉತ್ಥಾನದ್ವಾದಸಿ ದಿವಸದಂದದಕೃಷ್ಣ।
ಉತ್ತಮ ತುಲಸಿಗೆ ವಿವಾಹ।
ಚಿತ್ತನಿರ್ಮಲರಾಗಿ ಮಾಡಿದವರಿಗೆ।
ಉತ್ತಮ ಗತಿ ಈವ ಪುರಂದರವಿಠಲ।

ಮತ್ತು ಪ್ರತಿಯೊಬ್ಬರೂ ಮನೆಯ ಮುಂದೆ ಅಂಗಳದಲ್ಲಿ ಶ್ರೀ ತುಳಸೀವನವನ್ನು ಮಾಡಿ ಪಾಪವನ್ನು ಪರಿಹರಿಸಿಕೊಳ್ಳಬೇಕೆಂದು ಕೆಳಗಿನಂತೆ ಉಪದೇಶ ನೀಡಿದ್ದಾರೆ.

ಅಂಗಳದೊಳಗೆಲ್ಲ ತುಳಸಿಯವನ ಮಾಡಿ।
ಶೃಂಗಾರವ ಮಾಡಿ ಶೀಘ್ರದಿಂ।
ಕಂಗಳಪಾಪವ ಪರಿಹರಿಸುವ ಮುದ್ದು।
ರಂಗನು ಬಂದಲ್ಲಿ ತಾ ನೆಲೆಸಿದನು।

ಶ್ರೀ ತುಳಸಿಯು ಸರ್ವರ ಪ್ರೀತಿಗೆ ಪಾತ್ರಳಾಗಿ ಪೂಜೆಗೊಳುತ್ತಿರುವುದನ್ನು ಶ್ರೀ ಪ್ರಾಣೇಶವಿಠಲರು ಹೀಗೆ ಬಣ್ಣಿಸುತ್ತಾರೆ.

ಅಮಿತ ಮಹಿಮೆ ಸದ್ಗುಣಗಣಪೂರ್ಣೆ ಸು
ಕಮಲೇಕ್ಷಣ ಮಧುಸೂದನನರಸಿ॥
ಅಂದದಿ ವರಪಡೆದಿಂದಿಗೆ ಸರ್ವರ।
ಮಂದಿರದೊಳಗಿಹೆ ಪೂಜೆಯ ಕೊಳುತಲಿ॥

ಪರಮಾತ್ಮನು ಕೂಡ ಈ ತುಳಸಿಯಿಂದ ಅರ್ಚಿಸಿದವರನ್ನು ಕಾಪಾಡುತ್ತೇನೆಂದು ಹೀಗೆ ಅಭಯ ಕೊಟ್ಟಿದ್ದಾನೆ—

"ತುಲಸೀದಳ ಮಾತ್ರೇಣ ಮಾಮೇಕೇನ್ಯೈವ ಯಃ ಪುಮಾನ್।
ಪೂಜಯೇದ್ಭಕ್ತಿಭಾವೇನ ತಂ ರಕ್ಷಾಮೀತಿ ಮತ್ಪಣಃ॥

ಶ್ರೀ ವ್ಯಾಸರಾಯರು ತಮ್ಮ ಒಂದು ಪದ್ಯದಲ್ಲಿ 'ತುಲಸಿಮಧ್ಯದಿ ಇರುವ ಕೃಷ್ಣನ। ಬಳಸಿ ನೋಡುವಬನ್ನಿರೆ' ಎಂದು ವರ್ಣಿಸುವುದು ಮನಮುಟ್ಟುವಂತಿದೆ,

ಗೊಲ್ಲಸತಿಯರ ಗಲ್ಲಪಿಡಿದು।
ಎಲ್ಲ ನಟನೆಯ ತೋರಿ।
ಪುಲ್ಲನಾಭನ ಮೆಲ್ಲ ಮೆಲ್ಲನೆ।
ಎಲ್ಲ ಹೆಂಗಳು ನೋಡಿರೆ।

ತುಳಸಿಮಧ್ಯದಿ ಇರುವ ಕೃಷ್ಣನ ಹಾಗೂ

ಶ್ರೀ ಪದ್ಮಾವತೀ



ದೇವಾಲಯ

ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಪದ್ಮಾವತೀದೇವಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ವ್ಯಕ್ತಿಗಳು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

---

ಅಂಗರಾಗ ಶ್ರೀರಂಗಮಂಗಳ ।
ಸಿಂಗರದಿ ತಾ ನಿಂತಿಹ ।
ಮಂಗಳಾಂಗನ ಮಂಗಳಾರತಿ ।
ಹೆಂಗಳೆಲ್ಲರು ನೋಡಿರೆ ।

ತುಳಸಿ ಮಧ್ಯದಿ ಇರುವ ಕೃಷ್ಣನ ಬಳಸಿ ನೋಡುವ ಬನ್ನಿರೆ—

ಶ್ರೀ ತುಳಸಿಗೆ ಯಾವುದೂ ಸಮಾನವಿಲ್ಲವೆಂಬುದನ್ನು ಶ್ರೀಪುರಂದರದಾಸರು ತಮ್ಮ ಸುಳಾದಿಯೊಂದರಲ್ಲಿ ಮಾರ್ಮಿಕವಾಗಿ ವಿವರಿಸಿದ್ದಾರೆ.

ಸಂತತ ಹನ್ನೆರಡುಕೋಟಿ ಸುವರ್ಣದ ಪುಷ್ಪ
ಸಮರ್ಪಿಸಲು ।
ಅಂಥ ಫಲದಿ ಕೋಟಿ ಗುಣಿತ ಅರ್ಧ
ತುಲಸೀದಳ :
ಕೆಂತುಮಾತ್ರದಿ ಭಕುತಿಯಿಂದ ।
ಸಂತತ ನಮಿಸಲು ಶ್ರೀ ಪುರಂದರವಿಠಲ
ವೈಕುಂಠವನೀವಾ ॥

ಶ್ರೀ ತುಳಸಿಯನ್ನು ಯಾವ ಯಾವ ದಿನಗಳಲ್ಲಿ ತೆಗೆಯಕೂಡದು ಎಂಬುದನ್ನು ಈ ಪದ್ಯವು ತಿಳಿಸುತ್ತದೆ.

ಆದಿವಾರದಲ್ಲಿ ಸಂಜೆರಾತ್ರಿಯಲ್ಲಿ, ಅಂಗಾರಕ ಶುಕ್ರವಾರದಲ್ಲಿ, ವೈಧೃತೀ ವ್ಯತೀಪಾತ ಸಂಕ್ರಮಣಗಳಲ್ಲಿ, ತುಳಸಿ ತೆಗೆದರೆ ಶ್ರೀ ಪುರಂದರ ವಿಠಲ ಮುನಿವಾ ।

ತುಳಸಿ ಸಿಕ್ಕದೇ ಇರುವ ಪ್ರಸಂಗದಲ್ಲಿ ಹೇಗೆ ಪೂಜೆ ಮಾಡಬೇಕೆಂಬುವವರಿಗೆ—

"ಇಲ್ಲದಿದ್ದರೆ ಚಿಗುರ ಎಲಿಯು। ಇಲ್ಲದಿದ್ದರೆ ಬೇರು ಮೃತ್ತಿಕೆ। ಇಲ್ಲದಿದ್ದರೆ ಬರಡುಕಟ್ಟಿಗಿ ಅದೂ। ಇಲ್ಲದಿದ್ದರೆ ತುಲಸಿ, ತುಲಸಿ ಎಂದು ಕೂಗಿದರೆ ಸಾಕು" ಎಂಬುದಾಗಿ ತಿಳಿ ಹೇಳುತ್ತಾರೆ.

ಜಪಮಾಡುವದಕ್ಕೆ ಶ್ರೀ ತುಳಸೀ ಮಣಿ ಮಾಲೆಯೇ ಶ್ರೇಷ್ಠವೆಂದು ಹೀಗೆ ಬಣ್ಣಿಸಿ ಹೇಳುತ್ತಾರೆ.

ಒಂದು ಒಂದು ಬೆರಳು ಜಪ। ಒಂದೆ ಐದು ಬೆರಳು ಗೆರೆಯ ಜಪ। ಒಂದೆ ಹತ್ತು ಪೃಥುರಂಜಿ ಮಣಿಜಪ। ಒಂದೆ ಕೋಟಿ ದರ್ಭೆ ಗಂಟಿನಜಪ। ಒಂದೆ ಅನಂತ ತುಲಸಿ ಮಣಿಯಜಪ। ಹೀಗೆಂದು ಶ್ರೀ ಪುರಂದರ ವಿಠಲ ನೇಮಿಸಿದ್ದ।

ಇನ್ನೊಂದು ಸುಳಾದಿಯಲ್ಲಿ ಸ್ನಾನ, ದಾನಕ್ಕೆ ಶ್ರೀತುಳಸಿಯು ಅವಶ್ಯವೆಂಬುದಾಗಿ ಬಣ್ಣಿಸಿದ್ದಾರೆ.

ಸ್ನಾನದಾನಕೆ ತುಲಸಿದಳ ಪ್ರಿಯೋ।
ಜನಕೆ ತುಲಸಿ
ಶ್ರೀ ಪುರಂದರ ವಿಠಲಗೆ ಅತಿಪ್ರಿಯತುಲಸಿ।

ಇನ್ನು ಶ್ರೀ ತುಳಸೀದಳದಲ್ಲಿ ಪುಷ್ಕರಾದಿ ತೀರ್ಥಗಳು, ಗಂಗಾದಿನದಿಗಳು, ವಿಷ್ಣು ಮುಂತಾದ ದೇವತೆಗಳು ಸನ್ನಿಹಿತರಾಗಿರುತ್ತಾರೆಂಬುದು ನಿಶ್ಚಿತವೇ. ಮರಣೋನ್ಮುಖನಾದವನು ತುಳಸೀ ದಳವನ್ನು ಧರಿಸಿ ಅಂಗಕ್ಕೆ ತುಳಸೀ ಮೃತ್ತಿಕೆಯನ್ನು ಲೇಪಿಸಿಕೊಂಡರೆ ಅವನನ್ನು ಯಮರಾಜನು ಕಣ್ಣೆತ್ತಿಕೂಡ ನೋಡುವದಿಲ್ಲ. ಇದು ಈ ಶ್ಲೋಕದಿಂದ ತಿಳಿದುಬರುತ್ತದೆ—

ಲಲಾಟೇ ಯಸ್ಯ ದೃಶ್ಯೇತ
ತುಲಸೀ ಮೂಲಮೃತ್ತಿಕಾ ।
ಯಮಸ್ತಂ ನೇಕ್ಷಿತುಂ ಶಕ್ತಃ
ಕಿಮು ದೂತಾ ಭಯಂಕರಾಃ ॥

ಮತ್ತು ಶ್ರೀ ತುಳಸಿಯ ಛಾಯೆಯಲ್ಲಿ ಪಿತೃಗಳ ಉದ್ದೇಶವಾಗಿ ಮಾಡಿದ ಶ್ರಾದ್ಧವು ಅಕ್ಷಯವಾಗುತ್ತದೆ.

ಶ್ರೀ ತುಳಸೀಪತ್ರ ದಾನದಿಂದ ಹತ್ತುಸಾವಿರ ಗೋದಾನಮಾಡಿದ ಫಲ ಬರುತ್ತದೆ. ನಿತ್ಯವೂ ಭೋಜನಕಾಲದಲ್ಲಿ ತುಲಸೀ ಸೇವನೆ ಮಾಡುವವನು ಲಕ್ಷ ಅಶ್ವಮೇಧ ಯಜ್ಞಫಲವನ್ನು ಹೊಂದುತ್ತಾನೆ. ತುಳಸೀ ಕಾಷ್ಠದ ಮಾಲೆಯನ್ನು ಧಾರಣ ಮಾಡುವವನು ಹೆಜ್ಜೆ ಹೆಜ್ಜೆಗೂ ಅಶ್ವಮೇಧ ಯಜ್ಞದ ಫಲಹೊಂದುತ್ತಾನೆ.

ನರ್ಮದಾ ದರ್ಶನ, ಗಂಗಾಸ್ನಾನ ಮತ್ತು ತುಳಸೀವನದಲ್ಲಿ ವಾಸಿಸುವುದು ಇವು ಮೂರೂ ಸಮಾನವೆಂದು ತಿಳಿಯಲಾಗುತ್ತದೆ.

ಏಕಾದಶೀವ್ರತಂ, ಗೀತಾ ಗಂಗಾಂಬು
ತುಲಸೀದಲಮ್ ।
ವಿಷ್ಣೋಃ ಪಾದಾಂಬು ನಾಮಾನಿ ಮರಣೇ
ಮುಕ್ತಿದಾನಿ ಚ ।

ಎಂಬ ವಚನಾಮೃತದಂತೆ, ಏಕಾದಶೀ ವ್ರತ, ಭಗವದ್ಗೀತೆ, ಗಂಗಾಜಲ, ತುಳಸೀಪತ್ರ, ವಿಷ್ಣು ಪಾದೋದಕ, ವಿಷ್ಣುನಾಮ ಸಂಕೀರ್ತನ ಇವು ಅಂತ್ಯಕಾಲಕ್ಕೆ ಮುಕ್ತಿ ಪ್ರದವಾಗಿವೆ.

ಯಾದೃಷ್ಟಾ ನಿಖಿಲಾಘಸಂಘ ಶಮನೀ
ಸ್ಪೃಷ್ಟಾ ವಪುಃಪಾವನೀ
ರೋಗಾಣಾಮಭಿವಂದಿತಾ ನಿರಸನೀ
ಸಿಕ್ತಾಂತಕತ್ರಾಸಿನೀ :
ಪ್ರತ್ಯಾಸತ್ತಿವಿಧಾಯಿನೀ ಭಗವತಃಕೃಷ್ಣಸ್ಯ
ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ
ತುಲಸ್ಯೈ ನಮಃ ।

ಯಾವಳನ್ನು ನೋಡುವದರಿಂದ ಸಮಸ್ತ ಪಾಪ ಸಮೂಹವು ನಾಶಹೊಂದುವುದೋ, ಯಾವಳ ಸ್ಪರ್ಶದಿಂದ ದೇಹವು ಪವಿತ್ರವಾಗುವದೋ ಯಾವಳನ್ನು ವಂದಿಸಿದರೆ ರೋಗಗಳು ನಾಶವಾಗುವವೋ, ಯಾವಳ ಜಲಸೇಚನದಿಂದ ಮೃತ್ಯುಭಯ ದೂರಾಗುವದೋ ಮತ್ತು ತುಳಸೀ ವೃಕ್ಷವನ್ನು ನೆಟ್ಟು ನೀರುಣಿಸಿ ಯಾರು ಬೆಳೆಸುವರೋ, ಅವರಿಗೆ ಭಗವಂತನ ಸಂಪರ್ಕ ಹಾಗೂ ಪ್ರಸಾದ ಸಿಗುವಂತೆ ಯಾವಳು ಮಾಡುವಳೋ, ಯಾವಳನ್ನು ಪರಮಾತ್ಮನ ಚರಣಕಮಲಗಳಿಗೆ ಅರ್ಪಿಸುವದರಿಂದ ಮುಕ್ತಿಯನ್ನು ಕೊಡುವಳೋ ಅಂಥ ಶ್ರೀ ತುಳಸೀದೇವಿಗೆ ನಮಸ್ಕಾರವು.



(20 ನೇ ಪುಟದಿಂದ)
ದೇವರ ಆಶೀರ್ವಾದವನ್ನು ಪಡೆದರು. ಈಗ ಪ್ರತಿನಿತ್ಯವೂ ಪೂಜೆ ನಡೆಯುತ್ತಿದ್ದು, ಪ್ರತಿ ಭಾನುವಾರದಂದು ಅಭಿಷೇಕ ಅದ್ದೂರಿಯಿಂದ ಮೂರು ಗಂಟೆಗೂ ಹೆಚ್ಚುಕಾಲ, ನಡೆಯುತ್ತದೆ. ಈ ಒಂದು ಅಭಿಷೇಕ ಆಕರ್ಷಣೀಯವಾದದ್ದು.

ಶಿಲ್ಪದ ಉಳಿದ ಅದ್ಭುತವೆಂದರೆ ಆಂಜನೇಯನು ನಿಂತಿರುವ ಸೌಂದರ್ಯ. ಬೇರೆ ದೇವನಸ್ಥಾಗಳಲ್ಲಿದ್ದಂತೆ "ಸಂಜೀವಿನಿ ಪರ್ವತ" ವನ್ನು ಹನುಮಂತನು ಎಡಗೈಯಲ್ಲಿ ಎತ್ತಿಕೊಂಡಿರುವ ಅದ್ಭುತವಾದ ದೃಶ್ಯವನ್ನು ಕಾಣಬಹುದು. ಪುರಾಣಗಳ ಪ್ರಕಾರ, ಯುದ್ಧದಲ್ಲಿ ಮೂರ್ಛೆ ಹೋದ ಲಕ್ಷ್ಮಣನನ್ನು ಬದುಕಿಸಲು ಸಂಜೀವಿನೀ ಮೂಲಿಕೆಗಳನ್ನು ತರುವಂತೆ ಆಂಜನೇಯನಿಗೆ ಸುಶೇಷಣ ಹೇಳುತ್ತಾನೆ. ಆದರೆ ಹನುಮಂತನು ಸಂಜೀವಿನೀಪರ್ವತವನ್ನೇ ಹೊತ್ತು ತರುತ್ತಾನೆ.

ಹನುಮನಾಮಸ್ಮರಣೆ ಮಾಡಿ ಮುಕ್ತಿ ಪಡೆಯುವಾ
ಪವನಸುತನ ದಿವ್ಯನಾಮ ಭಜನೆ ಮಾಡುವಾ || ಪ ||

ಪಾಪವೆಂಬ ಭೀತಿಯಿಂದ ಪಾರುಮಾಡುವಾ
ಪುಣ್ಯವೆಂಬ ಹಾದಿಯಲ್ಲಿ ಸ್ವರ್ಗತೋರುವಾ
ಪರರ ಕಷ್ಟಕಾಗಿ ತನ್ನ ಶಕ್ತಿ ಸವೆಸುವಾ
ಪರಾಕ್ರಮಿ ಹನುಮನಾಮ ಬಿಡದೆ ಜಪಿಸುವಾ || ಹ ||

ರವಿಯ ಕಂಡು ಹಣ್ಣು ಎಂದು ತಿನ್ನಲು ಪೋದ
ರಾಮನಾಮ ಮಹಿಮೆ ಜಗಕೆ ಸಾರಿಹೇಳಿದ
ರಾವಣನ ಮೂಲ ತಿಳಿದು ನಾಶಮಾಡಿದ
ರೋಮರೋಮದಲ್ಲಿ ರಾಮನಾಮ ತೂಗಿದ || ಹ ||

ಲಂಕೆಸೇರಿ ರಾಮವಾರ್ತೆ ಸೀತೆಗರುಹಿದ
ಲಂಕಿಣಿಗೆ ಕೋತಿಯಂತ ರೂಪ ತೋರಿದ
ಲಕ್ಷ್ಮಣನ ಪ್ರಾಣಕಾಗಿ ಪರ್ವತ ತಂದ
ಭೀಮಸೇನ ಗರ್ವವನ್ನು ಭಂಗಮಾಡಿದ || ಹ ||

ಬ್ರಹ್ಮಜ್ಞಾನಿಯಾಗಿ ಬ್ರಹ್ಮಪಟ್ಟಕೇರಿದ
ಬ್ರಹ್ಮಚಾರಿದೇವನೆಂಬ ಹೆಸರು ಗಳಿಸಿದ
ಭಕ್ತಿಯಿಂದ ಮುಕ್ತಿಯೆಂಬ ಮಾರ್ಗ ತೋರಿದ
ಬಂಡೆಯಲ್ಲಿ ಬಣ್ಣದಿಂದ ಬಂದು ನೆಲಸಿದ || ಹ ||

ಮಾತೆಗಾಗಿ ರಾಮನೊಡನೆ ಯುದ್ಧ ಮಾಡಿದ
ಮಹಾಭಕ್ತ ಹನುಮನೆಂಬ ಖ್ಯಾತಿಗಳಿಸಿದ
ಮಹಾಲಕ್ಷ್ಮಿಪುರಕೆ ಬಂದು ಹನುಮ ನೆಲಸಿದ
ಮನಸಿದ್ದರೆ ಮಾರ್ಗವೆಂಬ ನೀತಿ ತೋರಿದ || ಹ ||

**ಹನುಮದಾಸ**

ಈ ಶಿಲ್ಪದಲ್ಲಿ ಶಿಲ್ಪಿಯ ಚಮತ್ಕಾರ ಬಹಳ ಚೆನ್ನಾಗಿ ಕಾಣುತ್ತದೆ. ಬಲಗಾಲು ಸ್ಥಿರವಾಗಿದ್ದ ಎಡುಗಾಲಿನ ಹಿಮ್ಮಡಿಯನ್ನು ಎತ್ತಿರುವುದನ್ನು ನೋಡಿದರೆ ಭಗವಂತ ಆಂಜನೇಯನು ಆನಂದದಿಂದ ತನ್ನ ಕೆಲಸ ಮುಗಿಸಿ ಬರುತ್ತಿರುವಂತೆ ಕಾಣುತ್ತದೆ.

ದೇವಸ್ಥಾನ ಪೂರ್ಣವಾದ ನಂತರ ಅದು 77 ಅಡಿಯ ಗೋಪುರವನ್ನು ಹೊಂದುತ್ತದೆ. ಇಡೀ ಬೆಂಗಳೂರಿಗೆ ಕಾಣಿಸುವಂತೆ ಗೋಪುರವು ಶೋಭಿಸುತ್ತದೆ. ಇದು ಇತರ ದೇವಾಲಯಗಳಂತೆ ಅಲ್ಲ. ಮೂರೂ ಕಡೆ ಮುಕ್ತವಾಗಿರುತ್ತದೆ. ಶಿಲ್ಪಿಯೊಬ್ಬರ ಪ್ರಕಾರ ಕಟ್ಟಡವು ಆರ್ಯರ ಮತ್ತು ದ್ರಾವಿಡರ ಸಂಸ್ಕೃತಿಗಳೆರಡನ್ನೂ ಹೊಂದಿರುತ್ತದೆ: ದೇವಸ್ಥಾನದ ಹೊರಗಡೆ ಭಾಗವನ್ನು ಅಮೃತ ಶಿಲೆಯಿಂದ ನಿರ್ಮಿಸುವುದಾಗಿ ಸಮಿತಿಯವರ ಅಂಬೋಣ· ದೇವಸ್ಥಾನದ ನಿರ್ಮಾಣ ಕಾರ್ಯಕ್ಕಾಗಿ ಭಾರತದ ನಾನಾ ಭಾಗಗಳಿಂದ ಬಂದಿರುವ ಕಾಣಿಕೆ ಸುಮಾರು ಹನ್ನೆರಡೂವರೆ ಲಕ್ಷರೂ ಎಂದು ಅಂದಾಜು.

ಈ ಶೋಭೆಗಳ ಜೊತೆಗೆ 28 ಅಡಿ ಎತ್ತರದ ಗರುಡಗಂಭ ಕೂಡ ಭಗವಂತ ಹನುಮಂತನ ಎದುರಿಗೆ ನಿಂತು ಶೋಭಿಸುತ್ತಿದೆ. ದೇವಾಲಯದ ಹಿಂಭಾಗದಲ್ಲಿ ಉತ್ಸವ ಮೂರ್ತಿಗಳನ್ನೂ ಇಡುವುದಕ್ಕಾಗಿ ಮೂರು ದೇವಾಲಯಗಳನ್ನು ಕೂಡ ನಿರ್ಮಿಸಲಾಗಿದೆ. ಅಲ್ಲದೆ ಬಿಳಿಯ ಅಮೃತ ಶಿಲೆಯಲ್ಲಿ ವಿನಾಯಕ, ಶ್ರೀರಾಮ, ಲಕ್ಷ್ಮಣ, ಸೀತೆ, ಮತ್ತು ಅಂಜನೇಯನ ಪ್ರತಿಮೆಗಳನ್ನು ಪ್ರತಿಷ್ಠಿಸಲಾಗುತ್ತದೆ. ಒಂದು ಪ್ರಾರ್ಥನಾ ಮಂದಿರವೂ ಕೂಡ ಈ ಯೋಜನೆಯಲ್ಲಿ ಸೇರಿದೆ.

ಒಂದು ಸಂಸ್ಕೃತ ಪಾಠಶಾಲೆ, ಗ್ರಂಥಾಲಯ ಮತ್ತು ವೈದ್ಯಕೀಯ ವ್ಯವಸ್ಥೆ ಈ ಸಮಿತಿಯ ಮತ್ತೊಂದು ಮುಖ್ಯ ಉದ್ದೇಶ.

(ಆಂ ಜ ನೇ ಯ ಯುವಶಕ್ತಿಯ ಅದಮ್ಯ ಚೈತನ್ಯದ ಪ್ರತಿಮೂರ್ತಿ. ಅಂಜನಾಸುತನಿಗೆ ಮೇ ತಿಂಗಳಿನಲ್ಲಿ ಜಯಂತ್ಯುತ್ಸವ.ಎಂದೇ ಮಹಾಲಕ್ಷ್ಮೀಪುರದ ಯುವಕ ಮಿತ್ರರ ಧಾರ್ಮಿಕ ಪ್ರಜ್ಞೆಯನ್ನೂ ಬಿಂಬಿಸುವ ಈ ಲೇಖನ —ಸಂ॥)

*

( 16 ನೇ ಪುಟದಿಂದ )

ಮನಸ್ಸನ್ನು ಮೋಹಿಸಿರಬೇಕೆಂದು' ಊಹಿಸಿ ನಡೆದುದನ್ನು ವಿವರಿಸಬೇಕೆಂದು ಆಕೆ ಬೇಡಿದಳು.

ಅದಕ್ಕೆ ಸಮಾಧಾನವಾಗಿ. 'ಪುಣ್ಯಪ್ರದವಾದ ತ್ರೇತಾಯುಗದಲ್ಲಿ ರಾವಣ ಸಂಹಾರಕ್ಕೆಂದು ಶಪಥ ಮಾಡಿದ ವೇದವತಿ ಎಂಬ ಕನ್ಯೆಯು ಅಗ್ನಿಹೋತ್ರನಿಗೆ ಶರೀರವನ್ನು ಅರ್ಪಿಸಲು ಎದುರು ನೋಡುತ್ತಿರುವಾಗ, ಅಗ್ನಿಹೋತ್ರನು ಅವಳನ್ನು ಸೀತಾರೂಪಿಣಿಯನ್ನಾಗಿ ಮಾಡಿ ಪರ್ಣಶಾಲೆಯಲ್ಲಿಟ್ಟು, ಸೀತಾದೇವಿಯನ್ನು ಪಾತಾಳದಲ್ಲಿ ಭದ್ರಪಡಿಸಿದನು. ರಾವಣ ಸಂಹಾರವಾದ ನಂತರ ವೇದವತಿ ಅಗ್ನಿಪ್ರವೇಶಮಾಡಲು ರಾಮಾವತಾರದಲ್ಲಿದ್ದ ನನಗೆ ಅಗ್ನಿಹೋತ್ರನು ನಿಜವಾದ ಸೀತೆಯನ್ನು ಪಾತಾಳದಿಂದ ಮೇಲೆ ತಂದು ಸಮರ್ಪಿಸಿದ. ಸಾಧ್ವೀರತ್ನವಾದ ಸೀತಾದೇವಿಗಾಗಿ ಸಕಲ ಕಷ್ಟಗಳನ್ನು ಅನುಭವಿಸಿದ ವೇದವತಿಗೆ ನಾನು ಏಕಪತ್ನೀವ್ರತ ವಿಧಾನ ನಿಮಗ್ನನಾಗಿರುವುದರಿಂದ ಮುಂದೆಬರುವ ಕಲಿಯುಗದಲ್ಲಿ ಲೋಕ ಸಂರಕ್ಷಣೆಗಾಗಿ ವೆಂಕಟಾಚಲದಲ್ಲಿ ಅವತರಿಸಿದಾಗ, ಆಕಾಶರಾಜನ ಮನೆಯಾದ ನಾರಾಯಣವರದಲ್ಲಿ ಆವಿರ್ಭವಿಸಿದ ಪರಮ ಭಾಗವತಶಿಖಾಮಣಿಯನ್ನು ಅರ್ಧಾಂಗಿಯಾಗಿ ಸ್ವೀಕರಿಸುತ್ತೇನೆಂದು ವರವನ್ನು ಪ್ರಸಾದಿಸಿದ್ದೆನು. ಪ್ರಸ್ತುತದಲ್ಲಿ ಆಕೆಯು ಪದ್ಮಾವತಿ ಎಂಬ ಹೆಸರಿನಿಂದ ನಾರಾಯಣವನದಲ್ಲಿ ಬೆಳೆಯುತ್ತಿರುವಳು. ಆ ನವಯೌವನ ಶೋಭನೆಯಾದ ಸುಂದರೀಶಿರೋಮಣಿ ಅಲ್ಲಿಗೆ ಹೋದ ನನಗೆ ಇಂದು ಸಾಕ್ಷಾತ್ಕರಿಸಿದಳು. ಅನುರೂಪ ಯೌವನಸ್ಥರಾದ ಸಖಿಯರ ಜೊತೆಯಲ್ಲಿ ನಂದನೋದ್ಯಾನದಲ್ಲಿ ಸರಸ ಚತುರ ಸಂಭಾಷಣೆಗಳೊಂದಿಗೆ, ಕಣ್ಣಿಗೆ ಹಬ್ಬವಾಗಿ ಕಾಣಿಸಿದ ಆ ಮೋಹನಾಂಗಿಯನ್ನು ವಿವಾಹವಾಗುವವರೆಗೂ ನನಗೆ ಮನಶ್ಶಾಂತಿ ಇಲ್ಲ,' ಎಂದು ಹೇಳಿದನು.

ಆ ಪ್ರಣಯ ಕಥೆಯನ್ನು ಆಲಿಸಿದ ವಕುಳಮಾಲಿಕೆಯು ತಕ್ಷಣವೆ ಉಚಿತ ಪ್ರಯತ್ನಗಳನ್ನು ಮಾಡುವ ನಿಮಿತ್ತ ನಾರಾಯಣವನಕ್ಕೆ ಹೋಗಬೇಕಾಗಿದೆ ಎಂದು ಹೇಳಲು. ನೋಡಿದ ಮಾತ್ರಕ್ಕೆ ವಿಸ್ಮಯವನ್ನುಂಟುಮಾಡುವ ಮನೋಹರ ಪರಿವೃತವಾದ ಆ ನಗರಕ್ಕೆ ಮಾರ್ಗವನ್ನು ಸೂಚಿಸಿದನು. ಆ ಪ್ರಕಾರ ಆರಣಿ ನದಿಯ ಒಳಿ, ಆವೃತವಾದ ಮಹೋನ್ನತ ಸೌಧಗಳಿಂದ ವಿರಾಜಿಸುತ್ತಿರುವ ಆಕಾಶರಾಜನ ನಗರವನ್ನು ಸೇರಿ ವಕುಳಮಾಲಿಕೆಯು ಪದ್ಮಾವತಿಯ ಸಖೀಜನರ ಪರಿಚಯವನ್ನು ಮಾಡಿಕೊಂಡು ರಾಜಧಾನಿಯ ಸುದ್ದಿ ವಿಶೇಷಗಳನ್ನು ತಿಳಿಸಬೇಕೆಂದು ಅವರನ್ನು ಕೋರಿದಳು. ಕೂಡಲೆ ಅವರು ನಂದನವನದಲ್ಲಿ ಸುಂದರಾಕಾರನನ್ನು ನೋಡಿದಂದಿನಿಂದ ಪದ್ಮಾವತೀದೇವಿಗೆ ಚಿತ್ತ ಚಾಂಚಲ್ಯ ಉಂಟಾಗಿದೆ ಎಂದು, ಅವಳಿಗೆ ಶರೀರ ಸ್ವಾಸ್ಥ್ಯವು ಸರಿಹೋಗಬೇಕೆಂದು ವೇದ ವಿದ್ಯಾಪಾರಂಗತ ವಿಪ್ರರಿಂದ ಆಕಾಶ ರಾಜ ಶ್ರೀಅಗಸ್ತ್ಯೇಶ್ವರ ದೇವಾಲಯದಲ್ಲಿರುವ ಲಿಂಗಕ್ಕೆ ಮಹಾಭಿಷೇಕ ಮಾಡಿಸುತ್ತಿರುವನೆಂದೂ ತಿಳಿಸಿದರು. ನಂತರ ತಾನು ರಾಜಪತ್ನಿ ಸಂದರ್ಶನ ಅಭಿಲಾಷೆಯಿಂದ ಶ್ರೀ ವೆಂಕಟಾಚಲದಿಂದ ದಿವ್ಯಹಯವನ್ನೇರಿ ಬಂದೆನೆಂದು ವಕುಳಮಾಲಿಕೆಯು ತಿಳಿಸಲು, ಆ ಸಖಿಯರು ಆಕೆಯನ್ನು ಸುಂದರ ರಾಜ ಮಂದಿರಕ್ಕೆ ಕರೆದುಕೊಂಡು ಬಂದರು.

ಇಷ್ಟರಲ್ಲೇ ರಾಜನಗರದಲ್ಲಿ ಒಂದು ಘಟನೆ ಜರುಗಿದ್ದಿತು. ನಗರ ಬೀದಿಗಳಲ್ಲಿ 'ಕಣಿಯಮ್ಮಾ ಕಣಿ ಭೂತಭವಿಷ್ಯತ್ತು ವರ್ತಮಾನಗಳನ್ನು ಇದ್ದದ್ದು ಇದ್ದಹಾಗೇ ಹೇಳ್ತೀನಿ' ಎನ್ನುತ್ತಾ ಒಬ್ಬ ಮಂತ್ರಸಾನಿ ತಿರುಗುತ್ತಿರುವಳು. ಅವಳನ್ನು ರಾಣಿ ಧರಣೀದೇವಿ ಕರೆದು ತಾನು ಮನಸ್ಸಿನಲ್ಲಿ ಅಂದುಕೊಂಡ ಪ್ರಶ್ನೆಗೆ ಸರಿಯಾದ ಉತ್ತರವನ್ನು ಸಂಕೋಚವಿಲ್ಲದೆ ಹೇಳೆಂದು ಕೇಳಿದಳು. ಅದಕ್ಕೆ ಪುಲಿಂದಸುಂದರಿ ಹೀಗೆ ಹೇಳಿದಳು, 'ಓ ತಾಯಿ ನಿನ್ನ ಮಗಳಿಗೆ ಪ್ರಿಯ ವಿರಹಜನಿತವಾದ ಮದನಜ್ವರವಲ್ಲದೆ ಬೇರೇನೂ ಅಲ್ಲ. ಅವಳ ದೇಹಶೋಷಣೆಗೆ ವ್ಯಾಧಿ ಕಾರಣವೆಂದು ಭಾವಿಸಬೇಡ. ದಿವ್ಯ ಮೋಹನ ಸ್ವರೂಪಿಯಾದ ನಿನ್ನ ಅಳಿಯ ಜಗತ್ಕಲ್ಯಾಣಕಾರಕನು. ಶ್ರೀ ವೆಂಕಟಾದ್ರಿ

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು ಕವನ. ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ನಿವಾಸಿಯಾದ ಶ್ರೀನಿವಾಸನನ್ನು ಉದ್ಯಾನವನದಲ್ಲಿ ವೀಕ್ಷಿಸಿದಂದಿನಿಂದ ಮೋಹ ಪರವಶಳಾಗಿರುವಳು. ಅದೇ ರೀತಿಯಲ್ಲಿ ಆ ಪುರುಷೋತ್ತಮನೂ ಸಹ ಮಹಾವಿಷ್ಣುವಾಗಿ ಒಬ್ಬ ಕನ್ಯಾಮಣಿಯನ್ನು ನಿನ್ನ ಬಳಿಗೆ ರಾಯಬಾರಕ್ಕಾಗಿ ಕಳುಹಿಸಿರುವನು. ಅದು ಸಫಲವಾಗಿ ನಿನ್ನ ಮಗಳಿಗೆ ಸರ್ವವ್ಯಾಧಿ ನಿವಾರಣೆಯಾಗಿ ಸರ್ವಾಭೀಷ್ಟಸಿದ್ಧಿಯು ಸಂಪ್ರಾಪ್ತವಾಗುತ್ತದೆ. ಚಿರಕಾಲವೂ ಆಕೆ ಮಹಾಲಕ್ಷ್ಮಿಗೆ ಸವತಿಯಾಗಿ ಮಧುರ ಮಂಗಳ ಮೂರ್ತಿಯಾದ ಶ್ರೀನಿವಾಸನ ಸತಿಯಾಗಿ ಸಕಲ ಸುಖಗಳನ್ನು ಅನುಭವಿಸುತ್ತಾಳೆ' ಅನಂತರ ಆ ಮಾಯಾ ಸ್ವರೂಪಿಣಿಯಾದ ಮಂತ್ರಸಾನಿಯು ರಾಜಮಂದಿರದಿಂದ ಹೊರಬಂದು ಅಂತರ್ಧಾನಳಾಗಿ ಶ್ರೀ ವೆಂಕಟಾದ್ರಿಯನ್ನು ಸೇರಿಕೊಂಡಳು.

ಅನಂತರ ಧರಣೀದೇವಿ ಅಂತಃಪುರದಲ್ಲಿ ವಿರಹಾವಸ್ಥೆಯನ್ನು ಅನುಭವಿಸುತ್ತಿದ್ದ ತನ್ನ ಮಗಳ ಬಳಿಹೋಗಿ ಅವಳ ಆಕಾಂಕ್ಷೆಯನ್ನು ಹೊರಪಡಿಸಬೇಕೆಂದು ಪ್ರೇಮಾರ್ದ್ರ ಹೃದಯದಿಂದ ಕೇಳಿದಳು. ಪದ್ಮಾವತಿ ದೇವಿಯು ಪರಬ್ರಹ್ಮ ಪುರುಷೋತ್ತಮನಾದ ಶ್ರೀಮನ್ನಾರಾಯಣನನ್ನು ಪಡೆಯುವುದಕ್ಕಿಂತ ಬೇರೆ ವಾಂಛಿತಗಳು ಇಲ್ಲವೆಂದು, ತಾನು ಮನಸ್ಸಿನಲ್ಲಿ ನಿರಂತರವೂ ಧ್ಯಾನಿಸುವ ನೀಲಮೇಘಶ್ಯಾಮ ದಿವ್ಯದೇಹಿಯಾದ ಹರಿಗೆ ಸೇವೆ ಮಾಡಲು ಅನುಕೂಲವಾಗುವಂತೆ ಅವನೊಂದಿಗೆ ಕಳುಹಿಸಿಕೊಡಿರೆಂದು ನಾಚಿಕೆಯ ಭಾರದಿಂದ ತಲೆಯನ್ನು ತಗ್ಗಿಸಿ ಹೇಳಿದಳು. ತನ್ನ ಮುದ್ದು ಕುವರಿಯ ಮನೋರಥವನ್ನು ಸಾಧಿಸುವ ಬಗೆ ಹೇಗೆಂದು ಧರಣೀದೇವಿ ನಿರಾಶೋಪಹತಳಾಗಿ ಚಿಂತಿಸುತ್ತಿರುವಾಗ ರಾಜಾಂತಃಪುರದ ದಾಸಿಯರು ದಿವ್ಯಾಂಗನೆಯಾದ ವಕುಳ ಮಾಲಿಕೆಯನ್ನು ಕರೆದು ತಂದರು. ಅವಳು ಶ್ರೀನಿವಾಸನ ವೃತ್ತಾಂತವನ್ನು ಪದ್ಮಾವತೀದೇವಿಯ ಪವಿತ್ರಗಾಥೆಯನ್ನೂ ಸಾಕಲ್ಯವಾಗಿ ನಿವೇದಿಸಿ ಆ ಇಬ್ಬರಿಗೂ ಶುಭವಾಗಿ,ಶೋಭಾಯಮಾನವಾಗಿ ವಿವಾಹವನ್ನು ಏರ್ಪಾಟು ಮಾಡಬೇಕೆಂದು ಕೋರಿದಳು. ಧರಣೀದೇವಿಯು ತನ್ನ ಪತಿಯನ್ನೂ, ಮಂತ್ರಿ ಪುರೋಹಿತರನ್ನೂ ಕರೆಸಿ ಪರಮಾನಂದದಿಂದ ಆ ಶುಭ ಸಮಾಚಾರವನ್ನು ತಿಳಿಯ ಪಡಿಸಿದಳು.

ದೈವಾಂಶಸಂಭೂತಳಾದ ಪದ್ಮಾವತಿ ದೇವಿ ಮತ್ತು ದೇವದೇವ ಶ್ರೀನಿವಾಸರ ವಿವಾಹವನ್ನು ಎಲ್ಲರೂ ಏಕಾಭಿಪ್ರಾಯದಿಂದ ಆಮೋದಿಸಿ ಆಕಾಶರಾಜನ ಅದೃಷ್ಟವನ್ನು ವಿಧ ವಿಧವಾಗಿ ಹೊಗಳಿದರು.

ಕೂಡಲೇ ಆಕಾಶರಾಜನು ದೇವಲೋಕದಿಂದ ಬೃಹಸ್ಪತಿಯನ್ನು ಬರಮಾಡಿಕೊಂಡು ಉತ್ತರ ಫಾಲ್ಗುಣ ನಕ್ಷತ್ರದಲ್ಲಿ ಕೂಡಿದ ಶುಭದಿನದ ಪಾಣಿಗ್ರಹಣ ಮಹೋತ್ಸವಕ್ಕೆ ಸುಮುಹೂರ್ತವನ್ನು ನಿರ್ಣಯಿಸಿಕೊಂಡನು. ಅದೇ ರೀತಿಯಾಗಿ ಶ್ರೀನಿವಾಸನು ಪರಿಣಯೋತ್ಸವಾಲಂಕಾರಗಳಲ್ಲಿ ಲಕ್ಷ್ಮೀ ಸಮೇತನಾಗಿ ನಾರಾಯಣವರವನ್ನು ಸೇರಿದನು. ಆ ದಿನ ರಾಜನಗರವೆಲ್ಲ ಹೊಸ ಶೋಭೆಯಿಂದ, ಹೊಸ ಸಂತೋಷದಿಂದ, ಹೊಸ ಕುತೂಹಲದಿಂದ, ಹೊಸ ಉತ್ಸಾಹದಿಂದ ಕಣ್ಣಿಗೆ ಹಬ್ಬವಾಗಿ ಜಗಜಗಿಸಿತು. ಬ್ರಹ್ಮಾದಿ ದೇವತೆಗಳು ಹಿಂದಿರಲು ಭಗವಂತನು ಕಲ್ಯಾಣ ವೇದಿಕೆಯನ್ನು ಏರಿದನು. ದೇವದುಂದುಭಿಗಳು ಮೊಳಗುತ್ತಿರಲು ದೇವತೆಗಳು, ಋಷಿಗಳು ಮೊದಲಾದವರ ಸಮಕ್ಷಮದಲ್ಲಿ ಪದ್ಮಾವತೀ ಶ್ರೀನಿವಾಸರ ಪರಿಣಯವು ಮಹಾ ವೈಭವದಿಂದ ಜರುಗಿತು.

ಅನಂತರ ಆಕಾಶರಾಜನ ಪ್ರಾರ್ಥನೆಯ ಮೇರೆಗೆ ಮಂದಸ್ಮಿತ ಸುಂದರವದನಾರವಿಂದನಾಗಿ ಪದ್ಮಾವತೀದೇವಿ ಸಮೇತನಾಗಿ ದಿವ್ಯಸ್ಥಳವಾದ ನಾರಾಯಣವರದಲ್ಲಿ ದರ್ಶನ ಕೊಟ್ಟು ಕೋರಿದ ವರಗಳನ್ನು ಪ್ರಸಾದಿಸುವ ಕಾರಣ ಶ್ರೀ ವೆಂಕಟೇಶ್ವರಸ್ವಾಮಿ ಅಲ್ಲಿಯೇ ನಿಂತನು. ಅಲ್ಲಿ ದೈವಾರಾಧನೆಯ ಜೊತೆಯಲ್ಲಿ ದಿವ್ಯ ಪ್ರಕೃತಿಯನ್ನೂ ಕೂಡ ನೋಡಿ ನಲಿಯಬಹುದು. ಆ ವಿಧವಾಗಿ ದಿವ್ಯ ಪ್ರಕೃತಿಯನ್ನು, ದೇವರನ್ನು ದರ್ಶಿಸಿ ಸೇವಿಸುವುದರಿಂದ ಚಿತ್ತ ಮಾಲಿನ್ಯವು ಕರಗಿ ಹೃದಯ ನೈರ್ಮಲ್ಯವುಂಟಾಗಿ ಮನಸ್ಸಿಗೆ ಈಶ್ವರ ಸಾಕ್ಷಾತ್ಕಾರ ಯೋಗ್ಯತೆಯು ಸಂಪ್ರಾಪ್ತವಾಗುತ್ತದೆ.

ಈ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯವು ಸ್ವಲ್ಪಕಾಲ ಮಾತ್ರ ತಿರುಪತಿ ದೇವಸ್ಥಾನದ ಒಡೆತನದಲ್ಲಿ ಇತ್ತು. ಅನಂತರ ಸ್ಥಾನಿಕ ಪ್ರಮುಖರಿಂದ ಕೂಡಿದ ಧರ್ಮಕರ್ತರ ಮಂಡಲಿಯ ಅಧ್ವರ್ಯದಲ್ಲಿ ನಿರ್ವಹಿಸಲ್ಪಡುತ್ತಿದ್ದಿತು. 1967 ನೇ ವರ್ಷದಲ್ಲಿ ಈ ಆಲಯವನ್ನು ತಮ್ಮ ಆಧೀನ ಮಾಡಿಕೊಂಡಂತಹ ತಿರುಮಲೆ ತಿರುಪತಿ ದೇವಸ್ಥಾನದವರು ನಾಲ್ಕು ಲಕ್ಷ ರೂಪಾಯಿಗಳ ಖರ್ಚಿನಿಂದ ಪುನರುದ್ಧಾರ ಮಾಡಿದರು.

ಅಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ವೈಖಾನಸ ಶಾಸ್ತ್ರಪ್ರಕಾರ ಪೂಜೆಗಳು ಉತ್ಸವಗಳು ನಡೆಯುತ್ತವೆ. ತಿರುಮಲೆ ಬ್ರಹ್ಮೋತ್ಸವದ ಸಮಯದಲ್ಲಿ ನಾರಾಯಣವರದಲ್ಲಿ ಶ್ರೀ ಪದ್ಮಾವತೀದೇವಿಯೊಂದಿಗೆ ಶ್ರೀನಿವಾಸನ ಕಲ್ಯಾಣೋತ್ಸವವು ನಡೆಯುವುದು. ಈ ದೇವಸ್ಥಾನದಲ್ಲಿ ವೇದಾಂತ ದೇಶಿಕರು ಬೆಳಗುತ್ತಿದ್ದಾರೆ. ಇವರಿಗ ಮಾಲೆಮರ್ಯಾದೆಗಳು ನಡೆದು, ವೇದಾಂತ ಪಾರಾಯಣ, ಪ್ರಬಂಧ ಪಾರಾಯಣ ಪ್ರಾರಂಭವಾದ ನಂತರ ಶ್ರೀದೈವ ಉತ್ಸವಕ್ಕೆ ಹೊರ ಹೊರಡುತ್ತಾರೆ. ಶ್ರೀ ವೆಂಕಟೇಶ್ವರ ಸ್ವಾಮಿಗೆ ಕಲ್ಯಾಣೋತ್ಸವ ನಡೆಯುವ ಶ್ರೀ ರಾಮನವಮಿಯ ದಿವಸ ಅನೇಕ ಮಂದಿ ಆರಾಧಿಸಿ ಶ್ರೀ ಸ್ವಾಮಿಯ ಅನುಗ್ರಹಕ್ಕೆ ಪಾತ್ರರಾಗುತ್ತಾರೆ.

ಮೊದಲು ವಿವಾಹಗಳ ಸಂದರ್ಭದಲ್ಲಿ ಅಡುಗೆಯನ್ನು ತಯಾರುಮಾಡುವುದಕ್ಕೆ ಮುನ್ನ ಒನಕೆ, ಬೀಸುವ ಕಲ್ಲುಗಳಿಗೆ ಶಾಸ್ತ್ರೋಕ್ತವಾಗಿ ಪೂಜೆಗಳನ್ನು ನಡೆಸುವುದು ಆಚಾರವಾಗಿದೆ. ಅದಕ್ಕೆ ಅನುಗುಣವಾಗಿ ಶ್ರೀನಿವಾಸನ ಕಲ್ಯಾಣಕ್ಕೆ ತಯಾರು ಮಾಡಿದ ಬೀಸುವ ಕಲ್ಲನ್ನು ಶ್ರೀ ಪದ್ಮಾವತೀದೇವಿಯ ಆಲಯದಲ್ಲಿ ಇಂದಿಗೂ ನೋಡಬಹುದು.

ಶ್ರೀ ರಾಮರ ಆಲಯದ ಪಕ್ಕದಲ್ಲಿರುವ ಪಾರಿಜಾತ ವೃಕ್ಷಕ್ಕೆ ಹಲವಾರು ಭಕ್ತರು ಪೂಜೆಗಳನ್ನು ಮಾಡಿ ವಾಂಚಿತಾರ್ಥ ಸಿದ್ಧಿಗಳನ್ನು ಪಡೆಯುವರು. ಶ್ರೀಕೃಷ್ಣ ಪರಮಾತ್ಮನು ಸತ್ಯಭಾಮೆಯ ಕೋರಿಕೆಯನ್ನು ನೆರವೇರಿಸುವ ಕಾರಣದಿಂದ ಇಂದ್ರನೊಡನೆಯಲ್ಲಿ ಯುದ್ಧ ಮಾಡಿ, ದೇವೇಂದ್ರನವನದಿಂದ ಪಾರಿಜಾತವೃಕ್ಷವನ್ನು ಸತ್ಯಭಾಮೆಯ ನಿವಾಸಕ್ಕೆ ತೆಗೆದುಕೊಂಡು ಬಂದನೆಂದೂ ಅದೇ ಇಂದಿಗೂ ನಾರಾಯಣವರದಲ್ಲಿರುವ ವೃಕ್ಷವೆಂದು ಭಕ್ತಜನರ ನಂಬಿಕೆ.

ಆರಣಿನದಿ ಮೇಲ್ಭಾಗದಲ್ಲಿ ಅವಿನಾಶಿನಿ ದೇವಿಯ ಆಲಯವು ಶೋಭಿಸುತ್ತಿದೆ. ಈ ಶಕ್ತಿ ಸ್ವರೂಪಿಣಿಯು ಅಷ್ಟ ಶ್ರೀ ಹಸ್ತಗಳಿಂದ ಶಿರದ ಮೇಲೆ ಅಗ್ನಿಜ್ವಾಲೆ, ರಾಕ್ಷಸ ಕಪಾಲ, ಎರಡೂ ಕಡೆಯೂ ಸೂರ್ಯ ಚಂದ್ರರು, ಕುತ್ತಿಗೆಯಲ್ಲಿ ರಾಕ್ಷಸ ಕಪಾಲ ಮಾಲೆಯಲ್ಲಿ, ಮಹಿಷಾಸುರನನ್ನು ವಧಿಸುತ್ತಿರುವಂತೆ ಮನೋಹರವಾಗಿ ಈ ದೇವಾಲಯದಲ್ಲಿ ನೆಲೆಸಿರುವಳು. ಮಹಿಷಾಸುರನ ಭರಿಸಲಾಗದ ಬಾಧೆಗಳಿಗೆ ಗುರಿಯಾದ ಮುಕ್ಕೋಟಿ ದೇವತೆಗಳ ಬಿನ್ನಹದ ಮೇರೆಗೆ ತ್ರಿಮೂರ್ತಿಗಳು ಆದಿ ಪರಾಶಕ್ತಿಯನ್ನು ಸೃಷ್ಟಿಸಿದರೆಂದು ನಾಲ್ಕು ಶಕ್ತಿಗಳಾಗಿ ಅವತರಿಸಿದ ಆದಿಪರಾಶಕ್ತಿ ಸ್ವರೂಪಿ ಅವನಾಕ್ಷಮ್ಮ ಎಂದು ಹೇಳುತ್ತಾರೆ. ಮೊದಲಿನ ಮೂರುಶಕ್ತಿಗಳು ಎಂದರೆ ಕಂಚಿ ಕಾಮಾಕ್ಷಿ. ಮಧುರೆಮೀನಾಕ್ಷಿ ಕಾಶಿ ವಿಶಾಲಾಕ್ಷಿ. ಆಕರ್ಷಣೀಯವಾದ ಈ ದೇವಾಲಯವನ್ನು ಸಂದರ್ಶಿಸಿದ ಆದಿ ಶಂಕರಾಚಾರ್ಯರು, ಅಮ್ಮನವರ ವಿಗ್ರಹದ ಬಳಿ ಪ್ರತಿಷ್ಠಾಪಿಸಿದ ತಾಮ್ರಚಕ್ರ ಶಾಸನವನ್ನು ಇಂದಿಗೂ ನೋಡಬಹುದು.

ಅಮ್ಮನವರ ದೇವಾಲಯದ ಹಿಂಭಾಗದಲ್ಲಿ ಆಕಾಶರಾಜನ ಕೋಟೆಗೆ ಸಂಬಂಧಿಸಿದ ಚಿಹ್ನೆಗಳು ಕಾಣಿಸುತ್ತವೆ. ಆ ಕೋಟೆಯ ಬಾಗಿಲಿನಲ್ಲಿ ಭೂವರಾಹಸ್ವಾಮಿಯ ಗುಡಿ ಶಿಥಿಲಾಕಾರವಾಗಿ ಇದೆ. ಸ್ವಾಮಿಯು ಮಾತ್ರ ತೊಡೆಯ ಮೇಲೆ ಆದಿಲಕ್ಷ್ಮಿಯನ್ನು ಪಾದಗಳ ಬಳಿ ಆದಿಶೇಷನನ್ನು ಹೊಂದಿ ಸಂದರ್ಶಕರಿಗೆ ಕಾಣಿಸಿಕೊಳ್ಳುತ್ತಾರೆ. ಆ ದೇವಸ್ಥಾನಕ್ಕೆ ಪಕ್ಕದಲ್ಲಿಯೇ ಅಗಸ್ತ್ಯೇಶ್ವರಸ್ವಾಮಿ ಆಲಯವು ಇದೆ.

ಸುಂದರವೂ ಸುಮನೋಹರವೂ ಆದ ಪರಿಸರದಲ್ಲಿ ಪವಿತ್ರ ದೇವಾಲಯಗಳೊಂದಿಗೆ ವಿರಾಜಿಸುತ್ತಿರುವ ನಾರಾಯಣವರಂ ಕ್ಷೇತ್ರ ಭಕ್ತರೆಲ್ಲರೂ ತಪ್ಪದೇ ನೋಡಲೇಬೇಕಾದ ದಿವ್ಯಕ್ಷೇತ್ರವಾಗಿದೆ.

---

ಅನುವಾದ:

ಶ್ರೀಮತಿ ಎಸ್. ವಿ. ಹೇಮಾವತಿ

---

(14 ನೇ ಪುಟದಿಂದ)

ಗಳನ್ನು ವ್ಯಕ್ತಪಡಿಸಿದ ಮೇಲೆ. ಪುರುಷೋತ್ತಮನು, ಅರ್ಜುನನನ್ನು ನಿಮಿತ್ತಮಾಡಿಕೊಂಡು, ವೇದಾಂತದ ಸಾರವಾದ ಭಗವದ್ಗೀತೆಯನ್ನು ಉಪದೇಶಮಾಡುತ್ತಾನೆ. ಪುರುಷೋತ್ತಮನು ಸಾರಿದ ಈ ಗೀತೆಯು ಅರ್ಜುನನನ್ನು ಕುರಿತು ಹೇಳಿದ್ದಾದರೂ, ಇದು ಇಡೀ ಜಗತ್ತಿಗೆ ಅನ್ವಯವಾಗುವುದು. ಈ ಉಪದೇಶವು ಸರ್ವಾದರಣೀಯವಾಗಿರುವುದಲ್ಲದೆ, ಜಗದ್ವಿಖ್ಯಾತವಾಗಿದೆ. ಸರ್ವಕಾಲಕ್ಕೂ ಸರ್ವರಿಗೂ ಅನ್ವಯವಾಗುವಂತಿದೆ, ಭಾರತೀಯ ಸಂಸ್ಕೃತಿಯ ಕೈಗನ್ನಡಿಯಂತಿದೆ.

ಈ ದಿವ್ಯ ಉಪದೇಶವನ್ನು ಕೇಳಿದ ತಕ್ಷಣ ಅರ್ಜುನನ ವಿಷಾದ ಕ್ಷಣದಲ್ಲಿ ಮಾಯವಾಗಿ ಹೊಸ ಹುರುಪು ಅವನಲ್ಲಿ ಹುಟ್ಟಿತು. ಗಾಂಡೀವವನ್ನು ಕೈಯ್ಯಲ್ಲಿ ಹಿಡಿದು "ಹೇ! ವಾಸುದೇವಾ, ನನಗೆ ಕವಿದಿದ್ದ ಕತ್ತಲೆ ಹೋಯಿತು. ನಿನ್ನ ಕರುಣೆಯಿಂದ ಸತ್ಯ ಮಾರ್ಗವನ್ನು ತಿಳಿದೆ. ನನ್ನಲ್ಲಿ ಜ್ಞಾನೋದಯವಾಯಿತು. ನಿನ್ನ ಕೃಪೆಯಿಂದ ಧರ್ಮ ಏನೆಂಬುದನ್ನು ತಿಳಿದೆ, ನೀನು ಹೇಳಿದಂತೆ ನಡೆಸಲು, ಇಗೋ! ಸಿದ್ಧವಾಗಿರುವೆನು" ಎಂದನು. ಅರ್ಜುನನಿಗೆ ಉಂಟಾದ ಪರಿಸ್ಥಿತಿ ಜಗತ್ತಿನ ಜನರಿಗೆ ಉಂಟಾಗಬೇಕೆಂಬುದು ಈ ದಿವ್ಯಗೀತೆಯ ಉದ್ದೇಶ.

ಪುರುಷೋತ್ತಮನು ಅರ್ಜುನನಿಗೆ "ಮಾಮೇಕಂ ಶರಣಂವ್ರಜ" ಎಂದೂ, ಉದ್ಧವನಿಗೆ 'ಮಯ್ಯಾವೇಶ್ಶಿತ ವಾಕ್‌ಚಿತ್ತಃ ಮದ್ಧರ್ಮ ನಿರತೋ ಭವ' ಎಂದೂ ಉಪದೇಶ ಮಾಡುತ್ತಾನೆ. ಇಂತಹ ಜ್ಞಾನದ ಕೊನೆಯೇ ಪರಮ ಭಕ್ತಿಯಾಗುತ್ತದೆ. ಆದುದರಿಂದಲೇ ಭಕ್ತರು ಹೀಗೆ ಪ್ರಾರ್ಥಿಸಿದ್ದಾರೆ—

'ಕೃಷ್ಣೋ ರಕ್ಷತು ನೋ ಜಗತ್ರಯ ಗುರುಃ।
ಕೃಷ್ಣಂನಮಸ್ಯಾಮ್ಯಹಂ।
ಕೃಷ್ಣೇನಾಮರಶತ್ರವೋ ವಿನಿಹತಾಃ
ಕೃಷ್ಣಾಯ ತಸ್ಮೈ ನಮಃ'

ಪುರುಷೋತ್ತಮನು ಸರ್ವವ್ಯಾಪಿ. ಸರ್ವಕರ್ತ, ಸರ್ವೋತ್ತಮ ಬುದ್ಧಿ ಅವನದು. ಪೂರ್ವರೀತಿಯ ತತ್ತ್ವವನ್ನು ಉಪದೇಶಿಸಿದ್ದಾನೆ. ಧರ್ಮತತ್ತ್ವಗಳನ್ನು ಎತ್ತಿ ತೋರಿಸಿದ್ದಾನೆ. ಅವನು ಸಂಗೀತಶಾಸ್ತ್ರ ಪರಿಣತಿಯ ಪ್ರತೀಕವಾಗಿದ್ದುದಲ್ಲದೆ, ಚಿಕಿತ್ಸಾಶಾಸ್ತ್ರ, ಅಶ್ವಶಾಸ್ತ್ರಾದಿಗಳಲ್ಲೆಲ್ಲ ಪರಿಪೂರ್ಣ ಕುಶಲತೆ ಹೊಂದಿದ್ದನು. ಅವನ ಸಾಹಸ, ಜಾಗರೂಕತೆ, ಧರ್ಮಶ್ರದ್ಧೆ, ದೂರಾಲೋಚನೆ ಮುಂತಾದ ಸದ್ಗುಣಗಳನ್ನು ಪ್ರದರ್ಶನ ಮಾಡಿರುವ ಉದಾಹರಣೆಗಳು ಅವನ ಚರಿತ್ರೆಯಲ್ಲಿ ವಿಪುಲವಾಗಿ ದೊರೆಯುತ್ತವೆ. ಅವನು ಪ್ರೀತಿಮಯ, ದಯಾಮಯ, ವೇದಜ್ಞ, ನೀತಿಜ್ಞ, ಧರ್ಮಜ್ಞ, ನಿರಪೇಕ್ಷ, ನಿರಹಂಕಾರಿ, ಸರ್ವರ ಹಿತೈಷಿ, ಕ್ಷಮಾಶೀಲ, ತಪಸ್ವಿ, ಸರ್ವೋತ್ತಮಯೋಗಿ, ಮಾನವ ರೂಪದಲ್ಲಿ ಮಾನವ ಶಕ್ತಿಯನ್ನು ತೋರಿಸಿ, ಅತಿಮಾನುಷ ಕಾರ್ಯವನ್ನು ಮಾಡಿ ತೋರಿಸಿ ಮಾರ್ಗದರ್ಶಕನಾಗಿದ್ದಾನೆ. ಅಂತಹ ಸಮರ್ಥನನ್ನು ಮಹಾನ್ ಮಹಿಮನನ್ನು ನೆನೆಯುವುದು ಮಾನವನ ಕರ್ತವ್ಯ. ಅಂತಹವನು ಜಗತ್ಪೂಜ್ಯನಾಗುವುದಲ್ಲದೆ, ಪರಮಾತ್ಮನ ಅವತಾರವೆಂದು ಕರೆಸಿಕೊಳ್ಳುವನು.

ಇಂದಿನ ಜಗತ್ತಿಗೆ ಪುರುಷೋತ್ತಮನ ಸಂದೇಶವೇನು? ಇದು ಸ್ವತಂತ್ರಯುಗ, ಅಪಾರ ಧನ ಗಳಿಸಬೇಕೆಂದು ಮಾನವರು ಇಷ್ಟಪಡುತ್ತಾರೆ. ಯಾವ ಕಟ್ಟು, ನಿಯಮಗಳಿಗೂ ಬದ್ಧರಾಗದೆ, ಸ್ವಚ್ಛಂದ ಜೀವನ ನಡೆಸಬೇಕೆಂಬ ಇಷ್ಟ ಹೆಚ್ಚುತ್ತಿದೆ. ಪಿತ–ಪುತ್ರ, ಗುರು–ಶಿಷ್ಯ, ಪತಿ–ಪತ್ನಿ, ಸೋದರ–ಸೋದರಿ, ಯಜಮಾನ–ಸೇವಕ ಇವರ ಸಂಬಂಧ ಸಡಿಲವಾಗುತ್ತಿದೆ. ಪರಸ್ಪರ ಇರಬೇಕಾದ ಶಕ್ತಿ ಗೌರವಗಳು ಮಾಯವಾಗುತ್ತಿವೆ. ಅಸತ್ಯ, ಅಸೂಯೆ, ಕೃತ್ರಿಮ, ಮೋಸ, ಪೈಪೋಟಿ ವೃದ್ಧಿಯಾಗುತ್ತಿವೆ. ನಿರುದ್ಯೋಗ, ಹಸಿವು, ದಾರಿದ್ರ್ಯ, ಅತೃಪ್ತಿ, ಅಸಹನೆ ಇತ್ಯಾದಿಗಳ ಹಾವಳಿ ಹೆಚ್ಚುತ್ತಿದೆ. ಜನ ಸಾಮಾನ್ಯದಲ್ಲಿ, ಸುಖವಿಲ್ಲ, ಶಾಂತಿ ಇಲ್ಲ. ಇಂತಹ ಪರಿಸ್ಥಿತಿಯಲ್ಲಿ, ಪುರುಷೋತ್ತಮನ ಅಮೃತವಾಣಿಯನ್ನು ಸ್ಮರಿಸಬೇಕು ಅವನ ಉಕ್ತಿಗಳನ್ನು ಪ್ರಚಾರಮಾಡಬೇಕು. ಸಾಮಾನ್ಯ ಜನರೂ ಕೂಡ, ಆ ಮಾತುಗಳ ಅರ್ಥವನ್ನು ತಿಳಿದು ಆಚರಿಸುವಂತಾಗಬೇಕು.

ಮಾನವನು ಸ್ವಲ್ಪಮಟ್ಟಿನ ತ್ಯಾಗ ಮಾಡಿದ ಹೊರತು ಸುಖ ಲಭಿಸುವುದಿಲ್ಲ. ಭೋಗಕ್ಕಿಂತ ತ್ಯಾಗ ಶ್ರೇಷ್ಠ. ಅವನು ಕರ್ತವ್ಯನಿಷ್ಠನಾಗಿ, ದಯೆ, ಕರುಣೆ. ಆದರ್ಶವನ್ನು ತೋರಿಸಬೇಕು. ಜಗತ್ತಿನಲ್ಲಿ ಸೋದರಭಾವನೆ, ಸಹಾನುಭೂತಿ ನೆಲಸಬೇಕಾದರೆ, ಅದರ ಪಾಠವನ್ನು ಪುರುಷೋತ್ತಮನ ಮಾರ್ಗದರ್ಶನದಿಂದ ಕಲಿಯಬಹುದು. ನೈತಿಕಮಾರ್ಗದಿಂದ ಶಾಂತಿಯನ್ನು ಸಾಧಿಸಬೇಕು. ಈ ಸಾಧನೆಗೆ ಭಾರತೀಯ ಸಂಸ್ಕೃತಿಯ ಪ್ರಗತಿ ಉತ್ತಮ ಸಾಧನವಾಗಬೇಕು ಎಂಬುದನ್ನು ಪುರುಷೋತ್ತಮನು ಚರಿತ್ರೆಯ ಹಿಂದೆ ಸಾರಿತು. ಇಂದೂ ಸಾರುತ್ತಿದೆ, ಮುಂದೆಯೂ ಸಾರುವುದು. ಚಿತ್ತವಿಭ್ರಾಂತಿಯಿಂದ ಕೂಡಿದ ಇಂದಿನ ಸಮಾಜಕ್ಕೆ, ಪುರುಷೋತ್ತಮನ ಉಪದೇಶ ರಾಮಬಾಣವಾಗಬೇಕು. ಇಂದಿನ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸಮಸ್ಯೆಗಳನ್ನು ಸಾಂಸ್ಕೃತಿಕ ನಿದರ್ಶನಗಳಿಂದ ಪರಿಹರಿಸಬಹುದು. ಅಂದರೆ ಜನರು ಈ ಚರಿತ್ರೆಯನ್ನು ತಿಳಿದು, ಮನನಮಾಡಿ. ಅಲ್ಲಿ ಬರುವ ಆದರ್ಶಗಳನ್ನು ಆಚರಿಸಬೇಕು, ಹೀಗೆ ಮಾಡಿದರೆ, ಮಾನವ ಸಮಾಜಕ್ಕೆ ಶಾಂತಿ, ಸುಖ ಎರಡೂ ಲಭಿಸುವುವು.

ಲೋಕಾನಾಂ ತ್ವಪರೋಧರ್ಮೋ
ವಿಷ್ವಕ್ಸೇನಃ ಪ್ರಜಾಪತಿಃ।
ಶಾರ್ಜಧನ್ವಾ ಹೃಷೀಕೇಶಃ
ಪುರುಷಃ ಪುರುಷೋತ್ತಮಃ॥

 

(12ನೇ ಪುಟದಿಂದ)

"ಕೇಶವ ಮಾಧವ ಗೋವಿಂದ ವಿಠಲೆಂಬ ದಾಸಯ್ಯ—ದೇವರಹಿತ ಸರವೇಷ ಧರಿಸಿದ ದಾಸಯ್ಯ ಬಂದ ಕಾಣೆ—ನಮ್ಮ ಪಾಂಡುರಂಗ ಪುರಂದರ ವಿಠಲ ದಾಸಯ್ಯ ಕಾಣೆ" ಎಂದು ದೇವರು ಬಂದುದನ್ನು ಕಂಡು ನಲಿಯುತ್ತಾರೆ. ಆ ವೇಳೆಗೆ ಹರಿದಾಸರೇ ಆಗಿದ್ದ ಅತಿಥಿಗಳು ಸ್ನಾನ ಮುಗಿಸಿ ಒಳಗೆ ಬಂದಿರುತ್ತಾರೆ.

ಆಗ ದೇವರ ದರ್ಶನವಾಯಿತೆಂದು ದಾಸರು, "ಬದುಕಿದೆನು—ಬದುಕಿದೆನು ಎನ್ನ ಭವ ಹಿಂಗಿತು—ಪದುಮನಾಭನ ಪಾದದೊಲುಮೆ ಎನಗಾಯಿತು—ತಂದೆ ಶ್ರೀಪುರಂದರ ವಿಠಲರಾಯನೇ ಬಂದೆನ್ನ ಹೃದಯದೊಳನೆಲೆಯಾಗಿ ನಿಂತ ಲಕ್ಷ್ಮೀಕಾಂತ ಪುರಂದರ ವಿಠಲ ಬರಲು ನನ್ನ ನಾಲಗೆ ತುದಿಯಲ್ಲಿ ಗಾಯನ ಮಾಡುತ ಧನ್ಯನಾದೆ" ಎಂದು ಹಾಡುತ್ತಾರೆ.

ದಾಸರು ಧೂಪ—ದೀಪಗಳನ್ನರ್ಪಿಸುತ್ತಾರೆ—'ಧೂಪಾರತಿಯ ನೋಡುವ ಬನ್ನಿ ನಮ್ಮಗೋಪಾಲ ಕೃಷ್ಣನ ಪೂಜೆಯ ಸಮಯವು', "ಏಕಾರತಿಯ ನೆತ್ತುವ ಬನ್ನಿ ನಮ್ಮ ಲೋಕನಾಥನ ಸಿರಿಪಾದವ ಬೆಳಗುತ" ಎಂದು ಹಾಡಿ ಆರತಿ ಬೆಳಗುತ್ತಾರೆ. "ನೈವೇದ್ಯಗೊಳ್ಳೋ ನಾರಾಯಣಸ್ವಾಮಿ—ದಿವ್ಯ ಷಡುರಸಾನ್ನವನಿಟ್ಟೆನೋ", "ಆರೋಗಣೆಯ ಮಾಡೋ ಎನ್ನಯ್ಯ ಆರೋಗಣೆಯ ಮಾಡೋ ಸರಸಿಜಾಲಯೆ ಲಕ್ಷ್ಮೀ—ಸರಸ್ವತಿ—ಭಾರತಿ ಪರಿಪರಿ ಆಡಿಗೆ ಸಿದ್ಧಮಾಡಿಹರೋ", "ಅಂಬುಜಮುಖಿ ಲಕ್ಷ್ಮಿ ತಾಂಬೂಲವ ಕೊಡುವಳು, ಕಂಬುಕಂಧರನೇ ಕೈಕೊಳುಬೇಗ" "ಫಲಹಾರವನು ಮಾಡೋ ಪರಮಪುರುಷ—ಭೂ ಬಲನೆ ಲಕ್ಷ್ಮೀ ಕಂದರ್ಪರ ಸಹಿತ" ಎಂದು ನೈವೇದ್ಯ—ಫಲ—ತಾಂಬೂಲಗಳನ್ನರ್ಪಿಸಿ, "ಪಂಕಜಮುಖಿಯರು ಬಂದು ಲಕ್ಷ್ಮೀ ವೆಂಕಟರಮಣಗಾರತಿಯೆತ್ತಿರೆ" ಎಂದು ಆರತಿ ಬೆಳಗಿ ಮಿಕ್ಕ ಪೂಜಾ ವಿಧಿಗಳನ್ನು ಮುಗಿಸಿ ಏಳುತ್ತಾರೆ.

ಬಂದ ಅತಿಥಿಗಳಿಗೆ ಫಲ ಪುಷ್ಪ ಪ್ರಸಾದಗಳನ್ನು ಕೊಟ್ಟು, ದಾಸರು ಅವರನ್ನು ಉಪಚರಿಸಿ, ಊಟ ಕ್ಕೆಬ್ಬಿಸುತ್ತಾರೆ. ದಾಸರು ನೀಡಿದ ಹರಿಗರ್ಪಿತವಾದ—ಹರಿ ಸ್ವೀಕೃತವಾದ ಶೇಷಪದಾರ್ಥಗಳನ್ನು ಅತಿಥಿಗಳುಂಡು ತೃಪ್ತಿ ಸೂಚಿಸಿ, ಧನ್ಯತೆಯನ್ನು ತಾವು ಹೊಂದಿದೆವೆನ್ನುತ್ತಾರೆ. ಅವರಿಗೆ ತಾಂಬೂಲ ದಕ್ಷಿಣೆಗಳ ವಿನಿಯೋಗವಾಗಿ, ದಾಸರು ಕೃಷ್ಣಾರ್ಪಣವೆಂದು ತಾವು ಮತ್ತು ತಮ್ಮ ಪರಿವಾರದವರು ಭೋಜನಕ್ಕೆ ಕೂಡಲು ಅಪ್ಪಣೆ ಬೇಡಿ ಪಡೆದು, ಬಾರಿಬಾರಿಗೂ "ಹರಿ ಹರಿ" ಯೆನ್ನುತ್ತ ಊಟ ಮುಗಿಸುತ್ತಾರೆ. ಅನಂತರ ತಮ್ಮ ಸಕ್ಕಿಯನ್ನು ಭೋಜನಕ್ಕೆಬ್ಬಿಸಿ—ಉಪಚರಿಸಿ ಅವರ ಊಟ ಮುಗಿಯುವರೆಗೆ ಕಾದಿರುತ್ತಾರೆ. ಅನಂತರ ತಲ್ಪ ವಿಶ್ರಾಂತಿ ಪಡೆಯುತ್ತಾರೆ.

ಮಧ್ಯಾಹ್ನ ದಾಸರ ವ್ಯಾಸಂಗ ಗ್ರಂಥ ಪಠಣ ಗ್ರಂಥ ರಚನಾಕಾರ್ಯಗಳು ನಡೆಯುತ್ತವೆ. ಮಕ್ಕಳೂ ಮತ್ತು ಪತ್ನಿಯೊಂದಿಗೂ ಕುಳಿತು ಪರಮಾತ್ಮನ ವಿಷಯವಾಗಿ ಚರ್ಚಿಸಿಡುತ್ತಾರೆ.

ಸಂಜೆಯಲ್ಲಿ ದಾಸರು ಗೋಸೇವೆ ಮುಗಿಸಿ, ಶ್ರೀ ವ್ಯಾಸರಾಯರ ದರ್ಶನಮಾಡಲು ಶ್ರೀಮಠಕ್ಕೆ ಹೊರಡುತ್ತಾರೆ. ಅಲ್ಲಿ ಅವರ ಪ್ರಿಯಮಿತ್ರ ಕನಕದಾಸರಿರುತ್ತಾರೆ. ಅಲ್ಲಿಗೆ ಆಗಮಿಸಿ ಸ್ವಲ್ಪ ದಿನಗಳಿಂದಲೂ ಬಿಡಾರ ಮಾಡಿರುವ ಶ್ರೀ ವಾದಿರಾಜ ಯತಿಗಳ ಶ್ರೀಪಾದ ದರ್ಶನ ಲಾಭಪಡೆಯುತ್ತಾರೆ ಅವರು. ದಾಸರ ಕೃತಿಗಳು "ಪುರಂದರೋಪನಿಷತ್ತು" ಎಂದು ಶ್ರೀ ವ್ಯಾಸರಾಜರು ಹೆಸರಿಸಿದುದು ಜನಜನಿತವಾಗಿದ್ದು, ಹಲವಾರು ಭಕ್ತರು ವ್ಯಾಸರಾಜ — ದಾಸರ ದರ್ಶನಕ್ಕೆ ಬಂದಿದ್ದವರು — ಗುರುವೃಂದಕ್ಕೆ ವಂದಿಸಿ ಸಂತೋಷದಿಂದ ದಾಸರ ಬಗೆಗೆ ವಿಶೇಷವಾಗಿ ಪ್ರಶಂಸಾನುಡಿಗಳನ್ನಾಡುತ್ತಾರೆ. ದಾಸರು ಸರ್ವವೂ ಹರಿ ಪ್ರೇರಣೆ — ಹರಿಕಾರ್ಯವೆಂದು ಹೇಳುತ್ತಾರೆ. "ದಾಸರೆಂದರೆ ಪುರಂದರದಾಸರಯ್ಯ" ಎಂಬ ವ್ಯಾಸರಾಜಕೃತ ಹಾಡನ್ನೊಬ್ಬರು ಹಾಡುತ್ತಾರೆ. ದಾಸರು ಸಮಚಿತ್ತರು. ಅದರೂ ಗುರುಗಳಿಂದ ರಚಿತ ಸ್ತೋತ್ರ ಅವರಿಗೆ ಸ್ವಲ್ಪ ಸಂಕೋಚ ಕಂಡಂತೆ ಕಾಣುತ್ತದೆ.

ಶ್ರೀಮಠದಲ್ಲಿ ಶ್ರೀ ಗೋಪಾಲಕೃಷ್ಣನ ಪೂಜೆಯನ್ನು ನೋಡಿಕೊಂಡು ಗುರುಗಳಿಂದ ಪ್ರಸಾದ—ಫಲ—ಮಂತ್ರಾಕ್ಷತೆ—ಆಶೀರ್ವಾದ ಪಡೆದು ಮನೆಗೆ ಮರಳುತ್ತಾರೆ.

ದಾಸರ ಮನೆಯಲ್ಲಿ ರಾತ್ರಿ ಭಜನೆ—ಪೂಜೆಗಳಿಗೆ ಪತ್ನೀ ಪುತ್ರರು— ಎಲ್ಲವನ್ನೂ ಅಣಿಮಾಡಿಟ್ಟಿರುತ್ತಾರೆ. ಬಾಲಕೃಷ್ಣನ ಮೂರ್ತಿಯನ್ನು ಬಣ್ಣದ ತೊಟ್ಟಿಲಿನಲ್ಲಿ ಮಲಗಿಸಿರುತ್ತಾರೆ. ಧೂಪ ಪಾತ್ರೆ, ದೀಪಗಳು ಸಿದ್ಧವಾಗಿವೆ. ಸುತ್ತಮುತ್ತಲಿನಿಂದ, ಮತ್ತು ಹೊಸದಾಗಿ ಬಂದ ಭಕ್ತಸಂದಣಿಯು ದಿವ್ಯ ಭಜನೆಯನ್ನು ಆಲೈಸುವ ಅನ್ಯತಾವಕಾಶವನ್ನು ನಿರೀಕ್ಷಿಸುತ್ತ ಸೇರಿ ಕುಳಿತಿದೆ. ಬಂದಬಂದವರು ದೀಪಗಳಿಗೆ ಎಣ್ಣೆಯನ್ನು ತಂದು ಇಡುತ್ತಿದ್ದಾರೆ. ತುಪ್ಪದ ಮಂಗಳಾರತಿ ಬತ್ತಿಗಳನ್ನು ಹಲವರು ತಂದಿದ್ದಾರೆ. ಸುಗಂಧದ ಬತ್ತಿಗಳು — ಧೂಪ ಇವನ್ನು ಹಲವರು ತಂದಿಟ್ಟು, ಧೂಪವನ್ನು ಅಲ್ಲಿ ಸಿದ್ಧವಾಗಿರುವ ಕೆಂಡದಲ್ಲಿ ಹಾಕುತ್ತಿದ್ದಾರೆ. ಹೂ ಮಾಲೆಗಳು ಪರಿಮಳದ ಪುಷ್ಪಗಳು ಮುಂತಾದವು ಬಂದು ಬಿದ್ದಿವೆ. ಹಣ್ಣು — ಕಾಯಿಗಳನ್ನು ತಂದು ದೇವರಿಗೆ ನೈವೇದ್ಯಕ್ಕೆಂದಿಟ್ಟಿದ್ದಾರೆ. ಇತರ ಬಗೆಯ ವಿನಿಯೋಗ ಯೋಗ್ಯ ಪ್ರಸಾದವನ್ನು ಹಲವು ಕಡೆಯರು ತಂದಿದ್ದಾರೆ.

ದಾಸರು ಸ್ನಾನ ಮಾಡಿ — ಸಾಯಂಕಾಲದ ಆಹ್ನಿಕಗಳನ್ನು ಮುಗಿಸಿ ಒಳಗೆ ಬರುತ್ತಿದ್ದಾರೆ. ಧೂಪ ಧೂಮ ಸುಗಂಧ ಹರಡಿದೆ. ಆಗಲೇ ಹಲವಾರು ದೀಪಗಳನ್ನು ಹೊತ್ತಿಸಿಟ್ಟದ್ದಾಗಿದೆ. ದಾಸರು ದೀಪಕ್ಕೂ, ಭಕ್ತವೃಂದಕ್ಕೆ ವಂದಿಸಿ ಭಜನೆಗೆ ಅಪ್ಪಣೆ ಬೇಡಿ ಪಡೆದು ಅನುವಾಗಿ ಕೂಡುತ್ತಾರೆ. ದಾಸರ ಮಕ್ಕಳು ಮೃದಂಗ — ತಾಳ — ತಂಬೂರಿ —ಗೆಜ್ಜೆಗಳನ್ನು ತಂದಿಟ್ಟು ದಾಸರೊಡನೆ ಕೂಡುತ್ತಾರೆ.

ವಾದ್ಯಧ್ವನಿ ಜೊತೆ ದಾಸರ ಕಂಠದಿಂದ ಓಂಕಾರದ ಝೇಂಕಾರ ನಾದ ಹೊರಟು ಎಲ್ಲೆಡೆ ಹರಡಿ—ನೆರೆದವರನ್ನು ಪುಳಕಗೊಳಿಸುತ್ತದೆ. ಮಂಗಳಾಚರಣೆ ಮಾಡಿ ದಾಸರು "ಶ್ರೀಪತಿಯು ನಮಗೆ ಸಂಪದವೀಯಲಿ ವಾಣೀ ಪಾತಿಯು ನಮಗೆ ದೀರ್ಘಾಯು ಕೊಡಲಿ" ಎಂದು ಸರ್ವೋತ್ತಮನ ಸರ್ವದೇವತಾಗಣದ ಆಶೀರ್ವಾದ ಬೇಡಿ, "ಎಲ್ಲಿ ಹರಿಕಥಾ ಪ್ರಸಂಗವೋ — ಅಲ್ಲಿ ಗಂಗಾ — ಯಮುನಾ — ಗೋದಾ — ಸಿಂಧು—ಸರಸ್ವತಿ, ಎಲ್ಲ ನದಿಗಳು ಬಂದು ಒಣೆಯಾಗಿ ನಿಲ್ಲುವವು" ಎಂದು ಹಾಡಿ ಹರಿಕಥಾ ಕೀರ್ತನೆಯ ಶ್ರವಣಕ್ಕಾಗಿ ದೇವನದಿಗಳೂ ಉತ್ಸುಕರಾಗಿರುವುದನ್ನು ತೋರಿಸುವರು. ನಂತರ ಗುರುಸ್ತವನಮಾಡಿ, "ಶ್ರೀಪತಿಯ ನಾಭಿಯಿಂದ ಅಜನು ಜನಿಸಿದನು" ಎಂದು ಪ್ರಾರಂಭಿಸಿ "ಮಹಾ ಭಾಷ್ಯಕಾರರೆ ನಮ್ಮ ಗುರು ಮುಖ್ಯಪ್ರಾಣರು — ಗುರುಮುಖ್ಯ ಪ್ರಾಣಪತಿ ಪುರಂದರ ವಿಠಲ" ನೆಂದು ಹಾಡಿ ನಲಿಯುತ್ತಾರೆ. ಗಣಪತಿಯಿಂದ ಪ್ರಾರಂಭಿಸಿ ಸರ್ವದೇವತೆಗಳೂ ಭಕ್ತರಿಗೆ ಅನುವಾಗುವ ಬಗೆ ಮತ್ತು ಆಯಾಯಾ ದೇವತೆಗಳಲ್ಲಿ ನಿಂತು ಹರಿಯೇ ಈ ಕೃತಿಗಳು ನಡೆಸುವನೆಂದು, "ಸತತ ಗಣನಾಥ ಸಿದ್ಧಿಯನೀವ ಕಾರ್ಯದಲಿ" ಎಂದು ಆರಂಭಿಸಿ "ಭಕುತಜನರೊಡೆಯ ನಮ್ಮ ಪುರಂದರ ವಿಠಲ ಸತತ ಇವರೊಳು ನಿಂತು ಈ ಕೃತಿಯ ನಡೆಸುವನು" ಎಂದು ಹಾಡುತ್ತಾರೆ. "ಸತ್ಯ ಜಗಕಿದು ಪಂಚಭೇದವು ನಿತ್ಯ ಶ್ರೀಗೋವಿಂದನ ಕೃತ್ಯವರಿತು, ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ" ಎಂದು ಜಗತ್ತು ಸತ್ಯವೆಂಬುದನ್ನು, ಪಂಚಭೇದಗಳಿರುವುದನ್ನೂ ತಾರತಮ್ಯ ರೀತಿಯನ್ನೂ ಹಾಡಿ ತೋರಿಸುತ್ತಾರೆ. ಅನಂತರ ಗಣಪತಿಯ ಸ್ತೋತ್ರದಿಂದಾರಂಭಿಸಿ ಸರ್ವ ದೇವತಾಗಣದ ಸ್ತೋತ್ರ ಮಾಡುತ್ತಾರೆ. ಶ್ರೀ ಭಾರತಿ ದೇವಿ — ಶ್ರೀ ಸರಸ್ವತಿದೇವಿಯನ್ನು, — ಶ್ರೀಮುಖ್ಯ ಪ್ರಾಣದೇವರ ಮಹಿಮೆ — ಅವತಾರ ವಿಶೇಷಗಳು

ಇದನ್ನು ಭಕ್ತಿಯೇ ಮೂರ್ತಿವೆತ್ತು ಬಂದು ನಿಂತಂತೆ ಭಾಸವಾಗುವಂತೆ ಹಾಡುತ್ತಾರೆ. ನಂತರ ಶ್ರೀ ಲಕ್ಷ್ಮೀದೇವಿಯನ್ನು ಬಗೆಬಗೆಯಾಗಿ ವರ್ಣಿಸುವ ಗೀತೆಗಳನ್ನು ದಾಸರು ಹಾಡುತ್ತಾರೆ. ಆ ನಂತರ ಶ್ರೀ ಹರಿಯನ್ನು ಆಹ್ವಾನಿಸುವ – ಆಗಮನವನ್ನು ಕಂಡ – ವೈಭವದ ವರ್ಣನೆಯ – ವಿವಿಧ ರೂಪ – ಅವತಾರಗಳ – ಮಹಿಮಾದ್ಯೋತಕವಾದ ಕ್ಷೇತ್ರಸ್ಥ ಮೂರ್ತಿಗಳ – ತಿರುಪತಿ ವೆಂಕಟೇಶನ–ಶ್ರೀಹರಿ–ಶ್ರೀನರಹರಿ – ಸ್ತೋತ್ರ ಹಾಡಿ, ನರ್ತನ ಮಾಡಲು ಗೆಜ್ಜೆ ಕಟ್ಟಿ ಅನುವಾಗುತ್ತಾರೆ. ಮಕ್ಕಳೂ ಸೇರುತ್ತಾರೆ. ಭಕ್ತರೂ ಎದ್ದು ನರ್ತಿಸಲು ನಿಲ್ಲುತ್ತಾರೆ. ಎಲ್ಲೊಡನೆ "ಹರಿ ಕುಣಿದ ನಮ್ಮ ಹರಿ ಕುಣಿದ ಅಕಳಂಕ ಚರಿತ ಮಕರ ಕುಂಡಲಧರ ಸಕಲರ ಪಾಲಿಪ ಹರಿ ಕುಣಿದ'' – "ನಾಚಿಕೆ ಪಡಬೇಡ ಮನದಲಿ ಯೋಚಿಸಿ ಕೆಡಬೇಡ ನೀಚನೇನೋ ಅಚ್ಯುತನೋಲಗ ಮೆಚ್ಚಿ ಕೊಟ್ಟಿದೆ ನಿನಗೆಚ್ಚಿನ ಪದವಿಯ" – "ಹುಚ್ಚು ಹಿಡಿಯಿತು ಎನಗೆ ಹುಚ್ಚು ಹಿಡಿಯಿತು – ಅಚ್ಯುತನ ನಾಮವೆಂಬ ಮೆಚ್ಚು ಮದ್ದು ತಲೆಗೆ ಏರಿ'' – "ಡಂಗರವ ಸಾರಿರಯ್ಯ ಡಿಂಗರಿಗರೆಲ್ಲರೂ – ಭೂಮಂಡಲಕ್ಕೆ ಪಾಂಡುರಂಗ ವಿಠಲ ಪರದೈವವೆಂದು" ಎಂದೂ, ಮಧ್ವಮತ ಪ್ರಶಂಸನೆಯನ್ನು "ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ ಬಿಟ್ಟು ಕೆಡಬೇಡಿ" ಎಂದು ಭಕ್ತರನ್ನು ಎಚ್ಚರಿಸುವ, "ವಿಠಲ ಸಲಹೋ ಸ್ವಾಮಿ –ವಿಠಲ ಜಗದಂತರ್ಯಾಮಿ" ಎಂದು ಎಲ್ಲೆಡೆ ವಿಠಲನನ್ನೇ ಕಾಣುವ ಅವನೆ ಬಂಧು ಬಳಗ ತಾಯಿ ತಂದೆ ಎನ್ನುವ, ಸಂಸಾರ ಬಾಧೆ ಬಿಡಿಸಲು ಬೇಡುವ, ಕೃತಿಯಿಂದಲೂ ಹಾಡಿ ಕುಣಿವ ನರ್ತನ ಸೇವೆ ಮುಗಿಸುತ್ತಾರೆ. ಘಮ ಘಮಿಸುವ ಧೂಪಾರತಿಯಾಗುತ್ತದೆ. ದೀಪಗಳು ಬೆಳಗುತ್ತವೆ. ನೈವೇದ್ಯ ಸಮರ್ಪಣೆಯಾಗಿ, ಮಂಗಳಾರತಿಯಾಗುತ್ತದೆ. ದಾಸರು ಎಲ್ಲರಿಗೂ ಮಂಗಳಾರತಿ ಕೊಡುತ್ತಾರೆ. ಆ ನಂತರ ಜೋಗುಳವನ್ನು –ಜೋ ಜೋ –ಸುಳಾದಿ ಹಾಡಿ ದೇವನ ತೊಟ್ಟಿಲನ್ನು ತೂಗುತ್ತಾರೆ. ನೆರೆದವರೆಲ್ಲ ಏನು ದಿವ್ಯ ಸಂದರ್ಭವಿದು! ಇದೇನು ಸುರಲೋಕವೋ – ಹೇಗೆ! ದಾಸರ ಭಜನೆಯು ಇಂದಿದ್ದಂತೆ ನಾಳೆಯಿಲ್ಲದೆ – ಹೊಸ ಹೊಸ ಕೃತಿ ಹೊಸದಾಗಿ ನಿತ್ಯವೂ ಅರಳುವ ಪರಿಮಳ ಕುಸುಮಗಳಂತೆ ಹೊಸ ಹೊಸದಾಗಿ ಬಂದೊದಗುವುವಲ್ಲ.! ಆದರೆ ಲಕ್ಷೋಪಲಕ್ಷ ಕೃತಿಕರ್ತರಾದ ದಾಸರಿಗೆ ಇದು ಅಚ್ಚರಿಯೇನೂ ಅಲ್ಲ, ಎಂದು ಮಾತನಾಡಿಕೊಳ್ಳುವುದು ಕೇಳಿಬರುತ್ತದೆ.

"ಇಂದಿನ ದಿನವೇ ಶುಭದಿನವು – ಇಂದಿನವಾರ ಶುಭವಾರ" ಎಂದೆನ್ನುತ್ತ ದಾಸರು ಎದ್ದು ಸರ್ವ ಸಮರ್ಪಣಾ ಭಾವದಿಂದ ದೇವರಿಗೆ ನಮಸ್ಕಾರ ಸಲಿಸಿ, ಭಕ್ತರಿಗೂ, ಹಿರಿಯರಿಗೂ ಬೇಡ ವೆಂದರೂ ನಮಸ್ಕರಿಸುತ್ತಾರೆ. ತಮ್ಮ ಪರಿವಾರದವರೆಲ್ಲರಿಗೂ ಭಕ್ತರಿಗೆ ನಮಸ್ಕಾರ ಮಾಡುವಂತೆ ಹೇಳುತ್ತಾರೆ.

ದಾಸರು ದೇವರಿಗೆ ಅರ್ಪಿಸಿದ ಹೂವಮಾಲೆ ಬಿಡಿ ಹೂಗಳನ್ನು ತೆಗೆದು ಎಲ್ಲರಿಗೂ ಹಂಚಲು ಮಕ್ಕಳ ಕೈಗೀಯುತ್ತಾರೆ. ದಾಸರ ಪತ್ನಿ ಸುಮಂಗಲೆಯರಿಗೆ ಸುಗಂಧ–ಸೌಭಾಗ್ಯ ದ್ರವ್ಯಗಳನ್ನು ಕೊಟ್ಟು ನಮಸ್ಕರಿಸುತ್ತಾರೆ. ಭಕ್ತರು ತಂದ ಹಣ್ಣು ಕಾಯಿಗಳ ಬುಟ್ಟಿ ತಟ್ಟೆಗಳು ಅವರವರಿಗೆ ದಾಸರ ಮಕ್ಕಳು ಕೊಡುತ್ತಾರೆ. ದೇವರಿಗೆ ನೈವೇದ್ಯವಾದ ಹಣ್ಣು–ಪ್ರಸಾದ ವಸ್ತುಗಳನ್ನು ಎಲ್ಲರೂ ದಾಸರಿಂದ ಪಡೆಯುತ್ತಾರೆ. ದಾಸರಿಗೆ ಭಕ್ತರು ಬಂದು, ಬೇಡವೆಂದರೂ, ಆಬಾಲವೃದ್ಧರಾದಿಯಾಗಿ ನಮಸ್ಕಾರ ಮಾಡುತ್ತಾರೆ. ಅವರ ಮಕ್ಕಳು ಭಕ್ತರಿಗೂ ತಂದೆ ತಾಯಿಗಳಿಗೂ ನಮಿಸುತ್ತಾರೆ. ಬಂದ ಭಕ್ತಜನರು ಮುಂದಿನ ಭಜನಾ ಪ್ರಸಂಗದ ನಿರೀಕ್ಷೆಯಲ್ಲಿಯೇ ಅಲ್ಲಿಂದ ತೆರಳುತ್ತಾರೆ.

ಇನ್ನು ದಾಸರು ರಾತ್ರಿಯ ಉಪಹಾರಕ್ಕೆ ತೆರಳಲು ತಡವಾಗಬಾರದು. ಇನ್ನು ಇಲ್ಲಿಂದ ಸರಿಯುವ ಸಮಯವಾಗಿದೆ, ಮನಸ್ಸಿಲ್ಲದ ಮನಸ್ಸಿನಿಂದ–ಕಾಲುಗಳನ್ನು ಕಿತ್ತು, ಈಗ ಹೊರಡಬೇಕಾಗಿದೆ. ದಾಸಶ್ರೇಷ್ಠರಿಗೆ ನಮೋ ನಮಃ, ಅವರನ್ನು ಎಷ್ಟು ಬಾರಿ ವಂದಿಸಿದರೆ ತೃಪ್ತಿಯಾದೀತು.

ಇಂತಿಷ್ಟು ದಾಸಶ್ರೇಷ್ಠ ಶ್ರೀ ಪುರಂದರ ದಾಸರ ಜೀವನದಲ್ಲಿಯ ಅವರು ದಿನವೊಂದನ್ನು ಕಳೆದಿರಬಹುದಾದ ಬಗೆಗಿನ ಕಾಲ್ಪನಿಕ ಚಿತ್ರವಿದೆ. ದಾಸವರ್ಯರ ಬಗೆಗೆ ಇಂತು ಬರೆಯುವುದು ಲಘುವಾಗಿ ಬರೆದಂತಾಯಿತೇನೋ-ಅಪಚಾರವಾಯಿತೇನೋ ಎಂಬ ಶಂಕೆ ಮೂಡಿ ಬಂದರೂ ಸಹ, ದಾಸರ ದ್ವಾರ–ಅವರ ಗುರು ಶ್ರೀ ವ್ಯಾಸರಾಜರ–ಎಲ್ಲ ಗುರು ಸಂತತಿಯ–ಎಂದರೆ ವಾಯುದೇವರವರೆಗೆ ಮತ್ತೆ ದ್ವಾರಾ ಶ್ರೀ ಸಿರಿ–ಹರಿ ಇವರ ಸ್ಮರಣೆ ಮಾಡಿದಂತಾಯಿತೇ ಹೊರತು ಅನ್ಯಥಾ ಅಲ್ಲವೆಂದು ಮನ ನುಡಿಯುತ್ತಿದೆ. ಈ ಎಲ್ಲ, ಗುರು–ದೈವರ ಕ್ಷಮೆ–ರಕ್ಷೆ ಬೇಡಿ ಇದನ್ನು ಬರೆದುದಾಗಿದೆ.

ಶ್ರೀ ವಾಯುದೇವರು ಪರಮಾತ್ಮನ ಅಪ್ಪಣೆಯ ಪ್ರಕಾರವೇ ಕಲಿಯುಗದಲ್ಲಿ ಲೋಕೋದ್ಧಾರಕ್ಕಾಗಿ ಬಂದಂತೆ. ಶ್ರೀ ನಾರದರೂ ಶ್ರೀ ಹರಿಯಾಜ್ಞೆಯಿಂದಲೇ–ಅದೇ ರೀತಿಯ ಉದ್ದೇಶ ಸಾಧನೆಗಾಗಿ ಪುರಂದರ ದಾಸರಾಗಿ–ವಾಯು ಮತಾನುಯಾಯಿಗಳಾಗಿ ಬಂದರು. ನಾರದಾಂಶರಾದ [illegible] ಪರಮಾತ್ಮನ ರೂಪ–ಗುಣ–ಕ್ರಿಯೆಗಳ ಧ್ಯಾನ–ಗಾಯನದಲ್ಲಿಯೇ ಜೀವಿತದ ಬಹು ಭಾಗವನ್ನು ನಡೆಸಿ ಸರ್ವ ಕಾಲಕ್ಕೂ ಒದಗುವಂತಹ ದಿವ್ಯ ಕೃತಿಗಳ ಮೂಲಕ, ಸದ್ಬೋಧೆಯನ್ನು ಭಕ್ತರಿಗಿತ್ತಿರುವರು. ಅವರಿಂದುದೆಲ್ಲ ವೇದಾರ್ಥಗಳೇ. ಅವರ ಕೃತಿಗಳು ಉಪನಿಷತ್ಸಮಾನವಾದುವು. ಇದಕ್ಕೆ ಅವರ ಗುರುಗಳಾದ ಶ್ರೀ ವ್ಯಾಸರಾಜರ ವಚನವೇ ಸಾಕ್ಷಿ. ಲಕ್ಷೋಪಲಕ್ಷ ಕೃತಿಗಳನ್ನು ರಚಿಸಿದ ಈ ಮಹಾತ್ಮರ ಜ್ಞಾನ–ಭಂಡಾರ, ಕಾವ್ಯ-ಸೃಷ್ಟಿ–ಶ[illegible] ಹೇಗೂ ನಿಲುಕದು. ಐದು ಲಕ್ಷ ಕೃತಿಗಳೂ ಐದು ಲಕ್ಷ ಪರಿಮಳ ಬೀರುವ ಸುಂದರ ಕುಸುಮದಂ[illegible]ಹವು. ಈ ಪಂಚಲಕ್ಷ ಪುಷ್ಪಾರ್ಚನೆ ಅವರ ಗುರಿಯಾಗಿದ್ದಿತೇನೋ. ಸಾಮಾನ್ಯವಾಗಿ ಒಂದುಲಕ್ಷ ಪುಷ್ಪಾರ್ಚನೆಯೇ ಎಷ್ಟು ಕಷ್ಟತರವೆಂಬುದು ಎಲ್ಲರೂ ಅರಿತ ವಿಚಾರವೇ. ಆದರೆ, ಈ ಕೃತಿ ಕುಸುಮ ಪೂಜೆಯು ದಾಸರಂತಹ ಮಹನೀಯರಿಗೆ ಮಾತ್ರ ಸಾಧ್ಯ. ಅವರು ದಾಸರು ಮೇರುಪರ್ವತದಂತೆ, ಎಲ್ಲರಿಗಿಂತ ಎತ್ತರವಾಗಿ ಹೊಳೆದು ಪ್ರಕಾಶ ಚೆಲ್ಲುವ ಏಕಮೇವಾದ್ವಿತೀಯರಾಗಿದ್ದಾರೆ.

ಇದರಲ್ಲಿನ ಮತ್ತೊಂದು ವೈಶಿಷ್ಟ್ಯವೇನೆಂದರೆ. ಅವರು ತಮ್ಮ ಐದುಲಕ್ಷದ ಕೃತಿ ರಚನೆಯ ಸ್ವಲ್ಪ ಭಾಗವನ್ನು ಶ್ರೀ ವಿಜಯದಾಸರ ಪಾಲಿಗೆ ರಚನೆಗಾಗಿ ಬಿಟ್ಟು ಹೋದರೂ. ತಮಗೆ ಲೀಲಾಜಾಲವಾದ ವಿಷಯವಾದರೂ ದಾಸರು–ಹೀಗೆ ಮಾಡಿದುದು ಶ್ರೀ ಕನಕದಾಸರೆಂದಂತೆ, "ದಾಸರಿಗೆ ಎರಡು ಜನ್ಮ, ಮುಂದೆ ತಮ್ಮ ಕೂಸಾದ ಭೃಗು ಮುನಿಯಲ್ಲಿ ಒಂದಂಶದಿ ನಿಂದು ವಿಜಯದಾಸರೆಂದು ಪೆಸರಂ ಪಡೆವ"ವರು. ಆದುದರಿಂದ, ಕೃತಿ ರಚನೆಯನ್ನು ವಿಜಯದಾಸರು ಅವತರಿಸಿದಾಗ ಒಂದಂಶದಲ್ಲಿ ಅವರಲ್ಲಿ ನಿಂದು ಪೂರ್ತಿ ಮಾಡಿ ಪಂಚಲಕ್ಷ ಪುಷ್ಪಾರ್ಚನೆ ಮುಗಿಸಿದ್ದಾರೆ.

ಯಮಧರ್ಮನೊಡನೆ ನರಕದಲ್ಲಿ ಸಾಗಿ, "ನಾರಾಯಣಾ" ಎಂದು ಚೀರಿ ನರಕಸ್ಥರನ್ನೆಬ್ಬಿಸಿದ ನಾರದರೇ ಪುರಂದರ ದಾಸರಾಗಿ ಯಮಾಂಶ ಕನಕದಾಸರೊಡನಿದ್ದು ಕಲಿಯುಗದಲ್ಲಿ ಭಕ್ತರ ಅವಸರಕ್ಕೊದಗಿ ಕಾಪಾಡಿದರು ಸೀತಾರಾಮ ವಿಠಲ ಪ್ರಿಯರು.

ಶ್ರೀ ದಾಸರ ಸ್ಮರಣೆಯೇ ಅನಂತ ಜನ್ಮದ ಪುಣ್ಯದ ಫಲ. ಆ ಫಲ ಕರುಣಿಸಿರುವವನು–ಶ್ರೀ ಸೀತಾರಾಮ ವಿಠಲಾಭಿನ್ನ–ಶ್ರೀಗುರುಗೋವಿಂದ ವಿಠಲಾಭಿನ್ನ–ಶ್ರೀಪಾಂಡುರಂಗ ವಿಠಲಾಭಿನ್ನ–ಶ್ರೀ ಲಕ್ಷ್ಮೀವೆಂಕಟೇಶನೇ.

★

# ನರಸಿಂಹ ಜಯಂತಿ

ಕುಮಾರಿ ಡಿ. ಎನ್. ಜಯಲಕ್ಷ್ಮಿ

ಪೂರ್ವದಲ್ಲಿ ಒಂದುದಿನ ವೈಕುಂಠದಲ್ಲಿ ಶ್ರೀಮನ್ನಾರಾಯಣನು ಲಕ್ಷ್ಮಿಯೊಡನೆ ಏಕಾಂತವಾಸದಲ್ಲಿದ್ದ ಸಮಯದಲ್ಲಿ ದ್ವಾರ ಪಾಲಕರಾದ ಜಯ ಮತ್ತು ವಿಜಯರಿಗೆ ಯಾರು ಬಂದರೂ ಒಳಗೆ ಬಿಡಬೇಡಿರೆಂದು ಆಜ್ಞೆ ಮಾಡಿದ್ದರು. ಶ್ರೀಮನ್ನಾರಾಯಣನ ದರ್ಶನಾರ್ಥವಾಗಿ ಸನಕಸನಂದನಾದಿಗಳೆಂಬ ಋಷಿವರ್ಯರು ಬರಲು ದ್ವಾರಪಾಲಕರಾದ ಜಯವಿಜಯರು ಅವರುಗಳನ್ನು ತಡೆದರು. ಋಷಿಗಳು ಬಹು ಕುಪಿತರಾಗಿ ಶಪಿಸಿ ಹೊರಟುಹೋದರು. ನಂತರ ದ್ವಾರಪಾಲಕರು ಶ್ರೀಮನ್ನಾರಾಯಣನನ್ನು ಪ್ರಾರ್ಥಿಸಲು, ಶ್ರೀಮನ್ನಾರಾಯಣನು ಋಷಿಗಳ ಮಾತು ತಪ್ಪಲಾರವು. ಆದ್ದರಿಂದ ನಿಮಗೆ ಎರಡು ಅವಕಾಶಗಳನ್ನುಕಲ್ಪಿಸಿಕೊಡುತ್ತೇನೆ. ಅದೇನೆಂದರೆ:– ನೀವಿಬ್ಬರೂ ನನಗೆ ಮಿತ್ರರಾಗಿ ಭೂಲೋಕದಲ್ಲಿ ಏಳು ಜನ್ಮಗಳು ಕಳೆಯುವ ವರೆಗೂ ಇದ್ದು ಬರುವಿರೋ? ಶತ್ರುಗಳಾಗಿ ಮೂರು ಜನ್ಮ ಕಳೆದು ಬರುವಿರೋ? ಎಂದು ಕೇಳಲು, ಜಯ ವಿಜಯರು "ಸ್ವಾಮಿ, ಭಕ್ತರಾಗಿ ಏಳುಜನ್ಮಗಳು ಕಳೆಯುವುದು ಬಹಳ ನಿದಾನವಾಗುತ್ತದೆ. ಆದ್ದರಿಂದ ಶತ್ರುಗಳಾಗಿ ಜನಿಸಿದರೂ ಚಿಂತೆಯಿಲ್ಲ. ಅಲ್ಪಕಾಲದಲ್ಲಿ ಮೂರು ಜನ್ಮಗಳನ್ನು ಹೊಂದಿ ನಿಮ್ಮ ಬಳಿಗೆ ಬರಬಹುದು ಎಂದು ಹೇಳಿ, ಮೂರು ಜನ್ಮಗಳನ್ನೇ ದಯಪಾಲಿಸಿರೆಂದು ಕೇಳಿಕೊಂಡರು. ನಾರಾಯಣನು "ಅಸ್ತು" ಎಂದು ವರವನ್ನು ದಯಪಾಲಿಸಿದನು. ಜಯವಿಜಯರು ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪು ಎಂಬ ಅಣ್ಣ ತಮ್ಮಂದಿರಾಗಿ ಭೂಲೋಕದಲ್ಲಿ ಜನ್ಮ ತಾಳಿದರು.

ಹಿರಣ್ಯಾಕ್ಷನು ವಿಷ್ಣುವಿನ ಮೇಲಿನ ದ್ವೇಷದಿಂದ ಭೂದೇವಿಯನ್ನು ಕದ್ದು ಸಮುದ್ರ ತಳದಲ್ಲಿ ಪಾತಾಳದಲ್ಲಿರಿಸಲು ವಿಷ್ಣುವು ಕೋಪಗೊಂಡು "ವರಾಹ" ಅವತಾರವನ್ನುತಾಳಿ, ಪಾತಾಳವನ್ನು ಹೊಕ್ಕು ಹಿರಣ್ಯಾಕ್ಷನನ್ನು ತನ್ನ ಕೋರೆದಾಡೆಗಳಿಂದ ಸೀಳಿ ಕೊಂದುಹಾಕಿದನು.

ತನ್ನ ಸೋದರನನ್ನು ಕೊಂದವನನ್ನು ಏನಾದರೂ ಮಾಡಿ ಕೊಂದೇ ತೀರಬೇಕೆಂದು ಹಿರಣ್ಯಕಶಿಪು ವಿಷ್ಣುವನ್ನು ಹುಡುಕುತ್ತಿದ್ದನು. ಹೀಗಿರಲು ಹಿರಣ್ಯಕಶಿಪುವಿಗೆ "ಪ್ರಹ್ಲಾದ" ನೆಂಬ ಮಗನು ಜನಿಸಿದನು. ಪ್ರಹ್ಲಾದನು ವಿಷ್ಣುಭಕ್ತನಾಗಿದ್ದನು. ಹಿರಣ್ಯಕಶಿಪುವಿಗೆ ವೈರಿಯಾಗಿದ್ದ ವಿಷ್ಣುವನ್ನು ಅನನ್ಯವಾಗಿ ಪ್ರಹ್ಲಾದನು ಪೂಜಿಸುತ್ತಿದ್ದನು. ಹಿರಣ್ಯಕಶಿಪು ತನ್ನ ಮಗನು ತನ್ನ ವೈರಿಯಾದ ವಿಷ್ಣುವನ್ನು ಹೊಗಳಿ ಹಾಡುವುದನ್ನು ಕೇಳಿ ಬಹಳ ಕುಪಿತನಾಗಿ ಪ್ರಹ್ಲಾದನನ್ನು ಚೆನ್ನಾಗಿ ದಂಡಿಸಿದನು. ಆದರೆ ಪ್ರಹ್ಲಾದನು ಹೆದರಲಿಲ್ಲ. ವಿಷ್ಣುವನ್ನೆ ಪುನಃ ಹೊಗಳಿದನು. ವಿಷ್ಣುವೇ ಸರ್ವಾಂತರ್ಯಾಮಿಯಾದ ನಾರಾಯಣನು ಅವನೇ ಶ್ರೇಷ್ಠನು ಎಂದು ಹೇಳುತ್ತಿದ್ದನು. ತನ್ನ ಮಗನ ಹಟವನ್ನು ನೋಡಿ ಹಿರಣ್ಯಕಶಿಪು ಚತುರೋಪಾಯಗಳ ಪ್ರಯೋಗದಿಂದ ಅವನನ್ನು ಗೆಲ್ಲಲು ಪ್ರಯತ್ನಿಸಿ ಸೋತು ಹೋದನು. ನಂತರ ಕುಪಿತನಾಗಿ ಬೆಟ್ಟದ ತುದಿಯಿಂದ ಕೆಳಕ್ಕೆ ನೂಕಿಸಿದನು. ಆದರೆ ಭಗವಂತನ ಔದಾರ್ಯ ಮತ್ತು ದಯೆಯಿಂದ ಭೂದೇವಿಯು ಪ್ರಹ್ಲಾದನನ್ನು ತನ್ನಶಕ್ತಿಯಿಂದ ರಕ್ಷಿಸಿದಳು.

ಮತ್ತೆ ಹಿರಣ್ಯಕಶಿಪು ಬೆಂಕಿಯೊಳಗೆ ನೂಕಿದನು. ಅಗ್ನಿದೇವನು ಪ್ರಹ್ಲಾದನಿಗೆ ಕೇಡನ್ನುಂಟು ಮಾಡಲಿಲ್ಲ. ಆನೆಗಳಿಂದ ತುಳಿಸಿದನು. ಭಗವಂತನ ದಯೆಯಿಂದ ಆನೆ ಭಾರ ಹೂವಿನ ಭಾರದಂತಾಗಿ ಪ್ರಹ್ಲಾದನು ಬದುಕಿದನು. ಮತ್ತೆ ಹಿರಣ್ಯಕಶಿಪು ವಿಷ ಪ್ರಯೋಗದಿಂದ ಕೊಲ್ಲೋಣವೆಂದು ಯೋಚಿಸಿ ಹಾಲಿಗೆ ವಿಷವನ್ನು ಬೆರೆಸಿ ಕುಡಿಯಲು ಕೊಟ್ಟನು. ಶ್ರೀಧರನ ಕೃಪೆಯಿಂದ ವಿಷ ಅಮೃತವಾಯಿತು. ಆಗಲೂ ಪ್ರಹ್ಲಾದನು ಸಾಯಲಿಲ್ಲ. ಕಟುಕರಿಂದ ಕೊಲ್ಲಿಸಲು ಯತ್ನಿಸಿದನು. ಆದರೆ ಕಟುಕರು ಪ್ರಹ್ಲಾದನನ್ನು ನಿರ್ಜನಪ್ರದೇಶಕ್ಕೆ ಕರೆದು ಕೊಂಡು ಹೋಗಿ ತಮ್ಮ ಕತ್ತಿಗಳಿಂದ ಅವನ ಕೊರಳಿಗೆ ಹೊಡೆದಾಗ ಕತ್ತಿಗಳು ಹೂಮಾಲೆಗಳಾಗಿ ಪರಿವರ್ತನೆ ಹೊಂದಿತು. ಅದರಿಂದ ಕಟುಕರು ಪ್ರಹ್ಲಾದನ ಕಾಲುಗಳಿಗೆ ನಮಸ್ಕರಿಸಿ ಹೊರಟುಹೋದರು. ಎಲ್ಲಾ ಪ್ರಯತ್ನದಲ್ಲೂ ವಿಫಲವಾಗಿ ಹಿರಣ್ಯಕಶಿಪು ಬಹಳ ಕೋಪಹೊಂದಿ ತಾನೇ ಪ್ರಹ್ಲಾದನನ್ನು ಕೊಲ್ಲಲು ಪ್ರಯತ್ನಿಸಿ "ಎಲೈ ಹುಡುಗ, ವಿಷ್ಣು ಎಲ್ಲಿದ್ದಾನೆ ತೋರಿಸು" ಎಂದು ಬೆದರಿಸಿದಾಗ ಪ್ರಹ್ಲಾದನು "ಅವನಿಲ್ಲದ ಸ್ಥಳವಿಲ್ಲ. ಪ್ರಪಂಚದಲ್ಲೆಲ್ಲೂ ಆತನಿರುವನು. ಎಲ್ಲರಲ್ಲೂ ತುಂಬಿರುವನು" ಎಂದು ಆಗ ಹೇಳಿದನು. ಹಿರಣ್ಯಕಶಿಪು "ನಿನಗೆ ಅವನನ್ನು ಕರೆಯುವ ಧೈರ್ಯವಿದ್ದರೇ ಈಗಲೇ ನನ್ನೆದುರಿಗೆ ನನ್ನ ವೈರಿಯನ್ನು ಕರೆ, ನೋಡೋಣ, ಧೈರ್ಯವಿದ್ದಲ್ಲಿ ನನ್ನೆದುರಿಗೆ



ಬರಲಿ ಸೀಳಿಬಿಡುತ್ತೇನೆ. ಅವನು ಒಂದು ವೇಳೆ ಬರದೇ ನೀನು ಸುಳ್ಳು ಹೇಳಿದೆಯಾದರೇ ನಿನ್ನ ನಾಲಿಗೆಯನ್ನು ಸೀಳಿ ಬಿಡುತ್ತೇನೆ ಎಂದನು. ಪ್ರಹ್ಲಾದನು ಭಗವಂತನನ್ನು ಅನನ್ಯ ಭಕ್ತಿಯಿಂದ ಧ್ಯಾನಿಸಿದನು. ಆದರೂ ವಿಷ್ಣುವು ಕಾಣಿಸಲಿಲ್ಲ. ಆಗ ಹಿರಣ್ಯಕಶಿಪು 'ಎ ಚಂಡಾಲ' ಎಲ್ಲಿ ನಿನ್ನ ದೇವ[illegible]? ಈ ಕಂಬದಲ್ಲಿರುವನೇ? ಎಲ್ಲಿ ತೋರಿಸು ಎಂದು ಬೆದರಿಸಿ ಆ ಕಂಬವನ್ನು ರಭಸವಾಗಿ ಒದ್ದನು. ಅವನು ಒದ್ದೊಡನೆ ಭಯಂಕರ ಶಬ್ದವಾಯಿತು [illegible] ದವು. ಶ್ರೀಮನ್ನಾರಾಯಣನು ನರಸಿಂಹಾವತಾರದಿಂದ ಎದುರಿಗೆ ಕಾಣಿಸಿಕೊಂಡನು. ಶ್ರೀ ನರಸಿಂಹದೇವನು ಕೂಡಲೇ ಅತನನ್ನು ತನ್ನ ಕೈ ಉಗುರಿನಿಂದ ಸೀಳಿ ಕರುಳನ್ನು ಬಗೆದು ಸಂಹಾರ ಮಾಡಿದನು. ದೇವತೆಗಳು ಹೂಮಳೆಗರೆದರು. ದೇವತೆಗಳು ಲಕ್ಷ್ಮಿಗೆ ಮೊರೆ ಇಡಲು ಆಕೆ ನರಸಿಂಹಸ್ವಾಮಿಯ ಬಳಿಗೆ ಬಂದಾಗ ನರಸಿಂಹದೇವರ ಕೋಪ ಶಾಂತವಾಯಿತು. ನಂತರ ಪ್ರಹ್ಲಾದನು ಶ್ರೀ ಲಕ್ಷ್ಮೀನರಸಿಂಹ ಸ್ವಾಮಿಗೆ ಕೈಮುಗಿದು ತನ್ನ ತಪ್ಪುಗಳೇನಾದರೂ ಇದ್ದಲ್ಲಿ ಕ್ಷಮಿಸಬೇಕೆಂದು ಕೇಳಿಕೊಂಡನು. ಶ್ರೀ ಲಕ್ಷ್ಮೀನರಸಿಂಹಸ್ವಾಮಿಯು ಪ್ರಹ್ಲಾದನಿಗೆ ಅಭಯವನ್ನು ನೀಡಿ [illegible] ದನು. [illegible] ಶ್ರೀ ಮಹಾವಿಷ್ಣು [illegible] ಪಲ್ಲಿ ಹೇಳಿರುವ ಶ್ಲೋಕವು ಹೀಗಿದೆ:—

ಸತ್ಯಂ ವಿಧಾತುಂ ನಿಜ ಭೃತ್ಯ ಭಾಷಿತಂ
ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ।
ಅದೃಶ್ಯತಾತ್ಯದ್ಭುತರೂಪ ಮುದ್ವಹನ್
ಸ್ತಂಭೇ ಸಭಾಯಾಂ ನಮೃಗಂ ನಮಾನು
ಷಂ ॥

ಹೀಗೆ ಶ್ರೀ ಮಹಾವಿಷ್ಣುವು ತಾನು ಕೊಟ್ಟ ವಾಕ್ಯಕ್ಕೆ ವಿರೋಧವಿಲ್ಲದಂತೆ, ಶ್ರೀ ನರಸಿಂಹನ ಅವತಾರವನ್ನು ಎತ್ತಿ ಅನಂತರ ಹಿರಣ್ಯಕಶಿಪುವನ್ನು ತನ್ನ ಕೈ ಉಗುರಿನಿಂದ ಸೀಳಿ ಸಂಹಾರ ಮಾಡಿದನು. ನರಸಿಂಹ ಎಂದರೆ ಮನುಷ್ಯ ಮತ್ತು ಸಿಂಹ ಎರಡು ರೂಪಗಳೂ ಸೇರಿದ್ದು ಎಂದರ್ಥ.

[illegible] ನರಸಿಂಹ [illegible] ಲಕ್ಷ್ಮೀ [illegible] ಶ್ರೀ ನರಸಿಂಹ [illegible] ಎಂಬ ವ್ರತವನ್ನು ಈಗಲೂ ಜನರ ಎಲ್ಲೆಲ್ಲೂ ಭಕ್ತಿಯಿಂದ ಆಚರಿಸುತ್ತಿರುವರು.

*

# ಕಿಶೋರ ಜಗತ್



## ಗಂಗಾವತರಣ

—ಶ್ರೀ ಮೈ. ನ. ನಾಗರಾಜ

ಹಿಂದೆ ಅಯೋಧ್ಯೆಯನ್ನು ಸಗರನೆಂಬ ಚಕ್ರವರ್ತಿ ಆಳುತ್ತಿದ್ದ ಸಗರ ಧರ್ಮದಿಂದ ರಾಜ್ಯವಾಳುತ್ತಿದ್ದ. ಅವನಿಗೆ ಇಬ್ಬರು ಪತ್ನಿಯರು. ಸಗರನಿಗೆ ಬಹುಕಾಲ ಮಕ್ಕಳು ಆಗಲಿಲ್ಲ. ಮಕ್ಕಳನ್ನು ಪಡೆಯುವ ಸಲುವಾಗಿ ತಪಸ್ಸನ್ನಾಚರಿಸಿದ. ದೇವತೆಗಳನ್ನು ಮೆಚ್ಚಿಸಿ ಮೊದಲನೆಯವಳಲ್ಲಿ ಒಂದು ಮಗುವನ್ನೂ, ಎರಡನೆಯವಳಲ್ಲಿ ಅರವತ್ತು ಸಾವಿರ ಮಕ್ಕಳನ್ನೂ ಪಡೆದ.

ಒಮ್ಮೆ ಸಗರ ಚಕ್ರವರ್ತಿ ಒಂದು ಯಾಗವನ್ನು ಮಾಡಿದ. ಯಾಗವನ್ನು ಎಲ್ಲ ರಾಜರೂ ಮಾಡುವ ಹಾಗಿಲ್ಲ. ಇಡೀ ಲೋಕವನ್ನು ಜಯಿಸಬಲ್ಲವರು ಮಾತ್ರ ಯಾಗವನ್ನು ಮಾಡಬಲ್ಲರು. ಆದಕ್ಕಾಗಿ ಯಾಗ ಮಾಡುವ ರಾಜ ಮೊದಲು ಒಂದು ಕುದುರೆಯನ್ನು ದೇಶ ವಿದೇಶಗಳಲ್ಲಿ ಸಂಚರಿಸಲು ಬಿಡುತ್ತಿದ್ದ. ಆ ಕುದುರೆಯ ಹಣೆಯ ಮೇಲೆ "ಇದು ಇಂತಹ ರಾಜನ ಕುದುರೆ. ಈ ರಾಜನು ಯಾಗಮಾಡಲು ಸಮರ್ಥನಾಗಿದ್ದಾನೆ. ಇದನ್ನು ಒಪ್ಪದವರು ಈ ಕುದುರೆಯನ್ನು ಕಟ್ಟಿಹಾಕಬಹುದು"ಎಂದು ಬರೆದ ಪಟ್ಟಿ ಇರುತ್ತದೆ. ಕುದುರೆ ಬೇರೆ ಬೇರೆ ದೇಶಗಳಿಗೆ ಹೋದಾಗ ಅಲ್ಲಿನ ರಾಜರು ಅದನ್ನು ನೋಡುತ್ತಾರೆ. ಅವರಿಗೆ ತಾವು ಯಜ್ಞಮಾಡುವ ರಾಜನಿಗಿಂತ ಶಕ್ತಿವಂತರು ಎಂದು ತೋರಿದರೆ, ಆ ಕುದುರೆಯನ್ನು ಕಟ್ಟಿಹಾಕುತ್ತಾರೆ. ಆಗ ಯಾಗ ಮಾಡುವ ರಾಜನಿಗೂ ಕುದುರೆಯನ್ನು ಕಟ್ಟಿಹಾಕಿದ ರಾಜನಿಗೂ ಯುದ್ಧ ನಡೆಯುತ್ತದೆ. ಯಾಗ ಮಾಡಲು ಇಚ್ಛಿಸುವ ರಾಜ, ಆ ಯುದ್ಧದಲ್ಲಿ ಗೆದ್ದರೆ ಮಾತ್ರ ಅವನು ಯಾಗವನ್ನು ನಡೆಸಬಹುದು.

ಹೀಗೆ ಸಗರ ಚಕ್ರವರ್ತಿಯೂ ಯಾಗ ಮಾಡುವ ಮುನ್ನ ಒಂದು ಕುದುರೆಯನ್ನು ತನ್ನ ಸೈನಿಕರೊಂದಿಗೆ ದೇಶ ವಿದೇಶಗಳಲ್ಲಿ ಸಂಚರಿಸುವ ಸಲುವಾಗಿ ಬಿಟ್ಟ. ಸಗರನು ಮಾಡಲು ನಿಶ್ಚಯಿಸಿದ ಯಜ್ಞ ಬಹು ದೊಡ್ಡದು. ಅದರಲ್ಲಿ ಅವನು ಯಶಸ್ಸು ಗಳಿಸಿದರೆ ಅವನ ಶಕ್ತಿ ದೇವತೆಗಳಿಗಿಂತ ಹೆಚ್ಚಾಗುತ್ತದೆ. ಇದರಿಂದ ದೇವತೆಗಳಿಗೆ ಗಾಬರಿಯಾಯಿತು. ಅವರು ಯಜ್ಞದ ಕುದುರೆಯನ್ನು ಬಚ್ಚಿಟ್ಟರು. ಅಂದರೆ ಯಜ್ಞಾಶ್ವ ಇಲ್ಲದೆ ಸಗರನು ಯಜ್ಞ ಮಾಡುವುದು ಸಾಧ್ಯವಿಲ್ಲದೆ ಹೋಯಿತು.

ಸಗರನಿಗೆ ಚಿಂತೆ ಆಯಿತು. ಅವನು ತನ್ನ ಮಕ್ಕಳನ್ನು ಕರೆದ. "ಮಕ್ಕಳೇ ನಮ್ಮ ಯಜ್ಞಾಶ್ವವನ್ನು ಯಾರೋ ಕದ್ದುಬಿಟ್ಟಿದ್ದಾರೆ. ಇದರಿಂದ ಯಜ್ಞ ಕೆಡುತ್ತದೆ. ನಮಗೂ ಕೆಡಕು ಉಂಟಾಗುತ್ತದೆ. ಆದ್ದರಿಂದ ನೀವೆಲ್ಲರೂ ಬೇರೆ ಬೇರೆ ದಿಕ್ಕುಗಳಿಗೆ ಹೋಗಿ. ಇಡೀ ಲೋಕವನ್ನೇ ಸಂಚರಿಸಿ. ನಮ್ಮ ಕುದುರೆಯನ್ನು ಹುಡುಕಿಕೊಂಡು ಬನ್ನಿ" ಎಂದ. ಆ ರಾಜಕುಮಾರರು ತಂದೆಯ ಆಜ್ಞೆಯಂತೆ ಇಡೀ ಪ್ರಪಂಚವನ್ನೇ ಹುಡುಕಿದರು- ಕಾಡುಗಳನ್ನು ಕತ್ತರಿಸಿದರು. ಸಮುದ್ರವನ್ನು ಅಗೆಸಿದರು. ಆದರೆ ಯಜ್ಞದ ಕುದುರೆ ಮಾತ್ರ ಸಿಗಲಿಲ್ಲ. ಸಗರನ ಮಕ್ಕಳು ಸಮುದ್ರವನ್ನು ಅಗೆದದ್ದರಿಂದ ಅದಕ್ಕೆ 'ಸಾಗರ' ಎಂದು ಹೆಸರು ಬಂತು.

ರಾಜಕುಮಾರರು ನಿರಾಶೆಯಿಂದ ತಂದೆಯ ಬಳಿಗೆ ಬಂದರು. 'ಕುದುರೆ ಸಿಗಲಿಲ್ಲ' ಎಂದರು. ಸಗರನಿಗೆ ಸಮಾಧಾನ ಆಗಲಿಲ್ಲ. ಅವನು ಹೇಳಿದ 'ಮಕ್ಕಳೇ' ಯಜ್ಞಾಶ್ವ ಇಲ್ಲದೆ ಯಾಗ ನಡೆಯಲಾರದು. ಯಾಗ ಮಾಡಬೇಕೆಂದು ನಿಶ್ಚಯಿಸಿದ್ದೇನೆ. ಈಗ ಅದನ್ನು ನಿಲ್ಲಿಸುವುದು ಅಪಮಾನಕರ. ಒಮ್ಮೆ ಕೈಹಿಡಿದ ಕೆಲಸವನ್ನು ಮುಗಿಸಲೇಬೇಕೆಂಬ ವ್ರತ ನನ್ನದು. ಆದ್ದರಿಂದ ನೀವು ಮತ್ತೆ ಹೋಗಿ. ಕುದುರೆಯನ್ನು ಹುಡುಕಿಕೊಂಡು ಬನ್ನಿ' ಎಂದ. ರಾಜಕುಮಾರರೆಲ್ಲ ಮತ್ತೆ ಹೊರಟರು: ಹಿಂದಿನ ಸಲ ಅವರು ಕಾಡುಗಳನ್ನೂ ಸಮುದ್ರವನ್ನೂ ಶೋಧಿಸಿದ್ದರು; ಈ ಸಲ ಭೂಮಿಯನ್ನು ಅಗೆದು ಪಾತಾಳಲೋಕಕ್ಕೆ ಹೋಗಿ ಕುದುರೆಯನ್ನು ಹುಡುಕಲು ನಿಶ್ಚಯಿಸಿದರು. ಅಗೆಯುತ್ತ ಅಗೆಯುತ್ತ ಪಾತಾಳಕ್ಕೆ ಬಂದು ತಲುಪಿದರು. ಪಾತಾಳದಲ್ಲಿ ಒಂದು ಆಶ್ರಮ. ಅಲ್ಲಿ ಕಪಿಲನೆಂಬ ಮುನಿ ತಪಸ್ಸು ಮಾಡುತ್ತಿದ್ದ. ಕಳೆದು ಹೋಗಿದ್ದ ಯಜ್ಞದ ಕುದುರೆ ಅಲ್ಲಿಯೇ ಹುಲ್ಲು ಮೇಯುತ್ತಿತ್ತು.

ಕುದುರೆಯನ್ನು ನೋಡಿದ ಸಗರನ ಮಕ್ಕಳಿಗೆ ಸಂತೋಷ. ಕೊನೆಗೂ ಅಶ್ವ

ಸಿಕ್ಕಿತಲ್ಲ ಎಂದ ಸಂಭ್ರಮಗೊಂಡರು. ಹಾಗೆಯೇ ಆ ಕುದುರೆಯನ್ನು ಕಪಿಲ ಋಷಿಯೇ ಕದ್ದಿರಬೇಕೆಂಬ ಸಂಶಯ ಬಂತು. ಋಷಿಯ ಮೇಲೆ ಬಹಳ ಕೋಪ ಬಂತು. "ಎಲಾ ಋಷಿಯೇ, ನಮ್ಮ ಯಜ್ಞಾಶ್ವವನ್ನು ಕದ್ದು ನಮಗೆ ಬಹಳ ತೊಂದರೆ ಕೊಟ್ಟಿದ್ದೀಯೆ. ಇದು ಸರಿಯಲ್ಲ. ನಿನಗೆ ಬುದ್ಧಿ ಕಲಿಸುತ್ತೇವೆ" ಎಂದು ಅವನ ಮೇಲೆ ಬೀಳಲು ಹೋದರು. ಕಪಿಲ ಮುನಿಗೂ ಕೋಪ ಬಂತು. ಕಣ್ಣು ತೆರೆದು ಅವರನ್ನು ದೃಷ್ಟಿಸಿ ನೋಡಿ 'ಹೂಂಕಾರ' ಮಾಡಿದ. ಕೂಡಲೇ ಸಗರನ ಅರವತ್ತು ಸಾವಿರ ಮಕ್ಕಳೂ ಸುಟ್ಟು ಬೂದಿಯಾಗಿ ಹೋದರು.

ರಾಜಕುಮಾರರು ಎಷ್ಟು ದಿನ ಕಳೆದರೂ ಹಿಂದಿರುಗಲಿಲ್ಲವೆಂದು ಸಗರರಾಜನಿಗೆ ಚಿಂತೆ ಆಯಿತು. ಅವನಿಗೆ ಅಂಶುಮಂತ ಎಂಬ ಮೊಮ್ಮಗನಿದ್ದ. ಸಗರನು ಅವನನ್ನು ಕರೆದ. 'ಅಂಶುಮಂತ, ಯಜ್ಞದ ಕುದುರೆಯನ್ನು ಹುಡುಕಿಕೊಂಡು ಬರಲು ಹೊರಟ ನಿನ್ನ ಚಿಕ್ಕಪ್ಪಂದಿರು ಎಷ್ಟು ವರ್ಷಗಳಾದರೂ ಹಿಂತಿರುಗಿಲ್ಲ. ನನಗೆ ಬಹಳ ಚಿಂತೆ ಆಗಿದೆ. ನೀನಾದರೂ ಯಜ್ಞಾಶ್ವವನ್ನೂ ನಿಮ್ಮ ಚಿಕ್ಕಪ್ಪಂದಿರನ್ನೂ ಹುಡುಕಿ ಕೊಂಡು ಬಾ' ಎಂದು ಹೇಳಿ ಕಳುಹಿಸಿದ. ಅಂಶುಮಂತ ತನ್ನ ಚಿಕ್ಕಪ್ಪಂದಿರನ್ನು ಹುಡುಕುತ್ತಾ ಇಡೀ ಲೋಕದಲ್ಲೆಲ್ಲಾ ಸಂಚರಿಸಿದ. ಕೊನೆಗೆ ಪಾತಾಳಲೋಕಕ್ಕೆ ಬಂದ. ಯಜ್ಞಾಶ್ವ ಅಲ್ಲಿಯೇ ಇತ್ತು. ಆದರೆ ಚಿಕ್ಕಪ್ಪಂದಿರ ಬದಲು ಒಂದು ದೊಡ್ಡ ಬೂದಿಯ ರಾಶಿ ಇತ್ತು. ಅಂಶುಮಂತ ನಡೆದ ಸಂಗತಿಯನ್ನು ಊಹಿಸಿದ. ಯಜ್ಞಾಶ್ವವನ್ನು ಕರೆದು ಕೊಂಡು ರಾಜಧಾನಿಗೆ ಹಿಂದಿರುಗಿದ. ತಾತ ಸಗರನಿಗೆ ನಡೆದ ವಿಷಯವನ್ನು ತಿಳಿಸಿದ. ತನ್ನ ಮಕ್ಕಳಿಗೆ ಒದಗಿದ ದುರ್ಗತಿಯಿಂದ ಸಗರನಿಗೆ ಬಹಳ ದುಃಖವಾಯಿತು. ಆದರೂ ಸಮಾಧಾನ ಮಾಡಿಕೊಂಡು ನಿಶ್ಚಯಿಸಿದ್ದ ಯಾಗವನ್ನು ಪೂರೈಸಿದ. ಆ ನಂತರ, ಹೇಗಾದರೂ ದೇವಲೋಕದ ಗಂಗೆಯನ್ನು ತನ್ನ ಮಕ್ಕಳ ಬೂದಿಯ ಮೇಲೆ ಹರಿಸಿ ಅವರಿಗೆ ಸದ್ಗತಿಯನ್ನು ದೊರಕಿಸಬೇಕೆಂದು ಪ್ರಯತ್ನಪಟ್ಟ. ಆದರೆ ಇಷ್ಟು ಹೊತ್ತಿಗೆ ಅವನಿಗೆ ಬಹಳ ವಯಸ್ಸಾಗಿತ್ತು. ಕೆಲವು ದಿನಗಳಲ್ಲೇ ಅವನು ಸ್ವರ್ಗಸ್ಥನಾದ.

ಸಗರನ ನಂತರ ಅಂಶುಮಂತ ಪಟ್ಟಕ್ಕೆ ಬಂದ. ಅವನೂ ಧರ್ಮದಿಂದ ರಾಜ್ಯ ಆಳಿದ. ಆದರೆ ಗಂಗೆಯನ್ನು ಪಾತಾಳಕ್ಕೆ ತೆಗೆದುಕೊಂಡು ಹೋಗಿ ತನ್ನ ಚಿಕ್ಕಪ್ಪಂದಿರಿಗೆ ಸದ್ಗತಿ ದೊರಕಿಸಬೇಕೆಂಬ ಅವನ ಆಸೆ ಆಸೆಯಾಗಿಯೇ ಉಳಿಯಿತು. ಅಂಶುಮಂತನ ಮಗ ದಿಲೀಪ. ಅವನೂ ಧರ್ಮಿಷ್ಠ. ಅವನಿಗೂ ಗಂಗೆಯನ್ನು ಕರೆತರಲು ಸಾಧ್ಯವಾಗಲಿಲ್ಲ. ದಿಲೀಪನ ಮಗನೇ ಭಗೀರಥ.

ಭಗೀರಥ ಹೇಗಾದರೂ ಗಂಗೆಯನ್ನು ಪಾತಾಳಲೋಕಕ್ಕೆ ಕರೆದುಕೊಂಡು ಹೋಗಬೇಕೆಂದು ಸಂಕಲ್ಪಮಾಡಿದ. ತನ್ನ ಅರವತ್ತು ಸಾವಿರ ಜನ ಮುತ್ತಾತಂದಿರಿಗೆ ಸದ್ಗತಿಯನ್ನು ದೊರಕಿಸಬೇಕೆಂದು ಅವನ ಆಸೆ. ಅದಕ್ಕಾಗಿ ಅವನು ರಾಜ್ಯವನ್ನು ಮಂತ್ರಿಗಳ ವಶಕ್ಕೆ ಒಪ್ಪಿಸಿದ. ತಪಸ್ಸು ಮಾಡಲು ಗೋಕರ್ಣ ಕ್ಷೇತ್ರಕ್ಕೆ ಹೋದ. ಒಂಟಿ ಕಾಲಿನ ಮೇಲೆ ನಿಂತು ಬ್ರಹ್ಮನನ್ನು ಕುರಿತು ಒಂದು ಸಾವಿರ ವರ್ಷ ಕಾಲ ಘೋರವಾದ ತಪಸ್ಸನ್ನು ಮಾಡಿದ. ಅವನ ತಪಸ್ಸಿಗೆ ಮೆಚ್ಚಿ ಬ್ರಹ್ಮ ಪ್ರತ್ಯಕ್ಷನಾಗಿ 'ಭಗೀರಥ, ನನ್ನ ತಪಸ್ಸಿಗೆ ಮೆಚ್ಚಿದ್ದೇನೆ. ನಿನ್ನ ಆಸೆ ನನಗೆ ತಿಳಿದಿದೆ. ಗಂಗೆಯನ್ನು ನಿನ್ನಿಚ್ಛೆ ಬಂದ ಕಡೆ ಕಳುಹಿಸಲು ನಾನು ಸಿದ್ಧ. ಆದರೆ ಸ್ವರ್ಗಲೋಕದಿಂದ ಅವಳು ಭೂಮಿಗೆ ಧುಮುಕಿದರೆ ಭೂಲೋಕವು ಕೊಚ್ಚಿ ಹೋಗುತ್ತದೆ. ಆದ್ದರಿಂದ ಭೂಲೋಕದಲ್ಲಿ ಅವಳನ್ನು ತಡೆಯುವವರೊಬ್ಬರು ಬೇಕು. ಕೆಲಸ ಮಾಡಲು ಶಿವನೊಬ್ಬನಿಗೇ ಸಾಧ್ಯ. ನೀನು ಶಿವನನ್ನು ಮೆಚ್ಚಿಸಿ ಅವನನ್ನು ಈ ಕಾರ್ಯಕ್ಕೆ ಒಪ್ಪಿಸು' ಎಂದು ಹೇಳಿದ. ಭಗೀರಥನು ಶಿವನನ್ನು ಕುರಿತು ತಪಸ್ಸನ್ನು ಆರಂಭಿಸಿದ. ಆಹಾರ ನಿದ್ರೆಗಳಿಲ್ಲದೆ ಬಹಳ ನಿಯಮದಿಂದ ಕಠೋರವಾದ ತಪಸ್ಸನ್ನೇ ಮೊದಲು ಮಾಡಿದ. ಶಿವ ಪ್ರತ್ಯಕ್ಷನಾದ. ಭಗೀರಥ ತನ್ನ ಅಭಿಲಾಷೆಯನ್ನು ತಿಳಿಸಿದ. ಶಿವನು ಸ್ವರ್ಗದಿಂದ ಬರುವ ಗಂಗೆಯನ್ನು ತಾನು ಭೂಮಿಯಲ್ಲಿ ತಡೆಯುವುದಾಗಿ ಒಪ್ಪಿಕೊಂಡ.

ಈಗ ಭಗೀರಥ ಗಂಗೆಯನ್ನು ಸ್ವರ್ಗದಿಂದ ಭೂಲೋಕಕ್ಕೆ ಬರುವಂತೆ ಪ್ರಾರ್ಥಿಸಿಕೊಂಡ. ಗಂಗೆ ಒಪ್ಪಿಕೊಂಡಳು. ಭೂಲೋಕಕ್ಕೆ ಧುಮುಕಲು ಸಿದ್ಧಳಾದಳು. ಶಿವನು ಅವಳನ್ನು ತಡೆಯಲು ಭೂಮಿಯಲ್ಲಿ ನಿಂತ. ಅದೊಂದು ಅಪೂರ್ವ ದೃಶ್ಯ. ಅದನ್ನು ನೋಡಲು ಆಕಾಶದ ತುಂಬ ದೇವತೆಗಳು ನೆರೆದರು. ಅದನ್ನು ಕಂಡು ಗಂಗೆಗೆ ಜಂಭವಾಯಿತು. ಮೊದಲಿನಿಂದಲೂ ಆಕೆಗೆ ನಾನು ಮಹಾ ಶಕ್ತಿಶಾಲಿ ಎಂಬ ಹೆಮ್ಮೆ. ಈಗಂತೂ ಅದು ಬಹಳ ಹೆಚ್ಚಾಯಿತು.

## ಆರ್ಜಿತ ಅಭಿಷೇಕ

## ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ, ಮಂಗಾಪುರ

### ಆರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಆರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ 100/–ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ. ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.

'ಭೂಮಿಗೆ ಧುಮುಕಿ ಶಿವನನ್ನು ಕೊಚ್ಚಿಕೊಂಡು ಹೋಗುತ್ತೇನೆ' ಎಂದುಕೊಂಡಳು. ಶಿವನಿಗೂ ಅವಳ ಗರ್ವ ತಿಳಿಯಿತು. 'ಅದನ್ನು ಮುರಿಯುತ್ತೇನೆ' ಎಂದು ನಿರ್ಧರಿಸಿದ. 'ಅವಳನ್ನು ನನ್ನ ಜಟೆಯಿಂದಲೇ ತಡೆಯುತ್ತೇನೆ' ಎಂದು ತನ್ನ ತಲೆಗೂದಲನ್ನು ವಿಶಾಲವಾಗಿ ಬಿಚ್ಚಿದ. ಗಂಗೆಯು ಸ್ವರ್ಗದಿಂದ ಭೂಮಿಗೆ ಬಹಳ ರಭಸದಿಂದ ಧುಮುಕಿದಳು. ಆದರೆ ಶಿವನ ಜಟೆಯುಲ್ಲಿ ಸಿಕ್ಕಿಹಾಕಿಕೊಂಡಳು. ಎಷ್ಟೇ ಪ್ರಯತ್ನ ಪಟ್ಟರೂ ಅಲ್ಲಿಂದ ಬಿಡಿಸಿಕೊಳ್ಳಲೂ ಆಗಲಿಲ್ಲ. ಅವಳ ಹೆಮ್ಮೆ ಮುರಿಯಿತು. ಗಂಗೆಯನ್ನು ತಲೆಯಲ್ಲಿ ಧರಿಸಿದ್ದರಿಂದ ಶಿವನು ಗಂಗಾಧರನಾದ.

ಭಗೀರಥನಿಗೆ ಚಿಂತೆ ಆಯಿತು. ಗಂಗೆಯನ್ನು ಅವನು ಪಾತಾಳಲೋಕಕ್ಕೆ ಕರೆದುಕೊಂಡು ಹೋಗಬೇಕಾಗಿತ್ತು. ಆದರೆ ಅವಳು ಶಿವನ ಜಟೆಯಲ್ಲಿ ಸಿಕ್ಕಿಹಾಕಿಕೊಂಡು ಬಿಟ್ಟಿದ್ದಳು. ಅವನು ಶಿವನನ್ನು ಮತ್ತೆ ಪ್ರಾರ್ಥಿಸಿದ. ಶಿವನು ಶಾಂತನಾಗಿ ಗಂಗೆಯನ್ನು ಭೂಮಿಯ ಮೇಲೆ ಬಿಟ್ಟನು. ಆಗ ಗಂಗಾನದಿ ಏಳು ಕವಲಾಗಿ ಒಡೆಯಿತು. ಅವುಗಳಲ್ಲಿ ಹ್ಲಾದಿನೀ, ಪಾವನೀ ಮತ್ತು ನಲಿನೀ ಎಂಬ ಮೂರು ಪ್ರವಾಹಗಳು ಪೂರ್ವ ದಿಕ್ಕಿನ ಕಡೆ ಹರಿದವು. ಸುಚಕ್ಷು, ಸೀತಾ ಮತ್ತು ಸಿಂಧು ಎಂಬ ಮೂರು ಪ್ರವಾಹಗಳು ಪಶ್ಚಿಮದ ಕಡೆ ಹರಿದವು. ಏಳನೆಯ ಪ್ರವಾಹ ಅಲಕನಂದಾ ಭಗೀರಥನ ಹಿಂದೆ ಹರಿದು ಬಂತು. ಭಗೀರಥ ರಥವನ್ನೇರಿ ಮುಂದೆ ಮುಂದೆ ಹೋದ. ಹಿಂದೆಯೇ ಅಲಕನಂದ ರಭಸದಿಂದ ಬಂತು.

ಗಂಗಾನದಿಯ ಆ ಪ್ರವಾಹದ ಜೊತೆಗೆ ಮೀನು, ಮೊಸಳೆ, ಆಮೆ ಮೊದಲಾದ ಜಲಚರ ಪ್ರಾಣಿಗಳೂ ಭೂಮಿಗೆ ಬಂದವು. ಮೊಸಳೆ, ಹಾವು ಮತ್ತು ಮೀನುಗಳು ಮಿಂಚುಗಳಂತೆ ಫಳಫಳನೆ ಹೊಳೆಯುತ್ತ ಬೀಳುತ್ತಿದ್ದವು. ನೀರಿನ ಬೆಳ್ಳಗಿನ ನೊರೆಯು ಸುತ್ತಮುತ್ತಲೂ ಸಿಡಿಯುತ್ತಿತ್ತು.

ಗಂಗಾ ನದಿಯು ಹರಿಯುವ ದೃಶ್ಯ ಮನೋಹರವಾಗಿತ್ತು. ಕೆಲವು ಕಡೆ ನಿಧಾನವಾಗಿಯೂ ಹರಿಯುತ್ತಿತ್ತು. ಕೆಲವೊಮ್ಮೆ ಜಲಪಾತದಂತೆ ಮೇಲಿನಿಂದ ಕೆಳಗೆ ಬೀಳುತ್ತಿತ್ತು. ಸೂರ್ಯನ ಕಿರಣಗಳೊಡನೆ ಮಿಳಿತವಾಗಿ ಹೊಳೆಯುತ್ತಿತ್ತು. ಹಲವು ಕಡೆ ರಭಸದಿಂದ ಹರಿಯುತ್ತಿತ್ತು. ಅದರಲ್ಲಿ ಮೀನುಗಳೂ, ಹಂಸಗಳೂ ಆಡಿ ನಲಿಯುತ್ತಿದ್ದವು, ಆ ನದಿಯಲ್ಲಿ ಸ್ನಾನ ಮಾಡಿ ಎಲ್ಲರೂ ಪುಣ್ಯವಂತರಾದರು.

ಹೀಗೆ ಮುಂದೆ ಮುಂದೆ ಹೋಗುತ್ತಿದ್ದಂತೆ ಒಂದು ಆಶ್ರಮ ಬಂತು. ಅಲ್ಲಿ ಜಹ್ನು ಎಂಬ ಋಷಿ ತಪಸ್ಸು ಮಾಡುತ್ತಿದ್ದ. ಗಂಗಾನದಿಯು ತನ್ನ ಪ್ರವಾಹದಲ್ಲಿ ಆ ಆಶ್ರಮವನ್ನು ಮುಳುಗಿಸಿಬಿಟ್ಟಿತು. ಜಹ್ನು ಋಷಿಗೆ ಕೋಪ ಬಂದು ಇಡೀ ನದಿಯನ್ನೇ ಕುಡಿದುಬಿಟ್ಟ.

ಭಗೀರಥನಿಗೆ ಮತ್ತೆ ಯೋಚನೆ ಉಂಟಾಯಿತು. ತನ್ನ ಕೆಲಸಕ್ಕೆ ಒಂದಲ್ಲ ಒಂದು ರೀತಿ ವಿಘ್ನ ಬರುತ್ತಿದೆಯಲ್ಲ ಎಂದು ದುಃಖವಾಯಿತು. ಅವನು ಋಷಿಯ ಬಳಿ ತನ್ನ ಕಥೆಯನ್ನು ಹೇಳಿದ. ಭೂಲೋಕಕ್ಕೆ ಗಂಗೆಯನ್ನು ತರಿಸುವ ತನ್ನ ಉದ್ದೇಶವನ್ನೂ ಅದಕ್ಕಾಗಿ ತಾನು ಪಟ್ಟ ಶ್ರಮವನ್ನೂ ವಿವರಿಸಿದ. ಜಹ್ನು ಋಷಿ ಗಂಗೆಯನ್ನು ಬಿಡದಿದ್ದರೆ ತನ್ನ ತಾತಂದಿರಿಗೆ ಸದ್ಗತಿ ದೊರಕುವುದಿಲ್ಲ ಎಂದು ತಿಳಿಸಿ ಗಂಗೆಯನ್ನು ಬಿಡಬೇಕೆಂದುದು ಪ್ರಾರ್ಥಿಸಿಕೊಂಡ.



" ಗಂಗಾವತರಣ "

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | ಪ್ರಾ 10–30 | ಮ 12–00 | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಭಗೀರಥನ ಪ್ರಾರ್ಥನೆಯಿಂದ ಋಷಿ ಪ್ರೀತನಾದ. ಅವನು ತನ್ನ ಕಿವಿಯ ಮೂಲಕ ಗಂಗೆಯನ್ನು ಬಿಟ್ಟ. ಜಹ್ನುವಿನ ಹೊಟ್ಟೆಯೊಳಗೆ ಹೋಗಿ ಬಂದದ್ದರಿಂದ ಗಂಗೆಯು ಜಹ್ನುವಿನ ಮಗಳಾದಂತಾಯಿತು. ಆದ್ದರಿಂದ ಅವಳಿಗೆ 'ಜಾಹ್ನವೀ' ಎಂಬ ಹೆಸರು ಬಂತು. ನಂತರ ಗಂಗೆ ಭಗೀರಥನ ಹಿಂದೆ ಹೋದಳು. ಭೂಲೋಕದಿಂದ ಪಾತಾಳ ಲೋಕವನ್ನು ತಲುಪಿದಳು. ಸಗರನ ಮಕ್ಕಳ ಬೂದಿಯ ಮೇಲೆ ಹರಿದಳು. ಅವರೆಲ್ಲರೂ ಪರಿಶುದ್ಧರಾಗಿ ಸ್ವರ್ಗವನ್ನು ಪಡೆದರು. ಭಗೀರಥನ ಪ್ರಯತ್ನ ಸಾರ್ಥಕ ಆಯಿತು. ಹೀಗೆ ಭಗೀರಥನ ಪ್ರಯತ್ನದಿಂದ ಗಂಗೆಯು ಸ್ವರ್ಗಲೋಕದಿಂದ ಇಳಿದು ಭೂಲೋಕ ಮತ್ತು ಪಾತಾಳ ಲೋಕಗಳಲ್ಲಿ ಹರಿದ ನಂತರ ಬ್ರಹ್ಮನು ಭಗೀರಥನ ಮುಂದೆ ಪ್ರತ್ಯಕ್ಷನಾದ. ಹಠ ಬಿಡದೆ ಹಿಡಿದ ಕೆಲಸವನ್ನು ನೆರವೇರಿಸಿದ ಅವನನ್ನು ಅಭಿನಂದಿಸಿದ. "ಭಗೀರಥ, ನಿನ್ನ ಪರಿಶ್ರಮದಿಂದ ಗಂಗೆಯು ಸ್ವರ್ಗಲೋಕ, ಭೂಲೋಕ ಮತ್ತು ಪಾತಾಳಲೋಕಗಳಲ್ಲಿ ಸಂಚರಿಸುವಂತೆ ಆಯಿತು. ಹೀಗೆ ಅವಳು ಮೂರು ಲೋಕಗಳಲ್ಲಿ ಹರಿಯುವುದರಿಂದ ಅವಳು 'ತ್ರಿಪಥಗಾ' ಎಂದು ಪ್ರಸಿದ್ಧಳಾಗುತ್ತಾಳೆ. ಗಂಗೆಯು ನಿನಗೆ ಮಗಳ ಸಮಾನ. ಆದ್ದರಿಂದ ಪ್ರಪಂಚವು ಅವಳನ್ನು 'ಭಾಗೀರಥಿ' ಎಂದು ಕರೆಯಲಿ. ಈ ಗಂಗಾನದಿ ಪವಿತ್ರವಾದದ್ದು. ಇದು ಪುಣ್ಯನದಿ. ಭಕ್ತಿಯಿಂದ ಗಂಗಾನದಿಯಲ್ಲಿ ಸ್ನಾನ ಮಾಡಿದವರಿಗೆ ರೋಗ ರುಜಿನಗಳ ಭಯ ಇರುವುದಿಲ್ಲ. ಪುಣ್ಯ ಲಭಿಸುತ್ತದೆ. ಗಂಗಾವತರಣವನ್ನು ಮಾಡಿಸಿದ ನೀನು ಧನ್ಯ. ನಿನಗೆ ಮಂಗಳವಾಗಲಿ' ಎಂದು ಹಾರೈಸಿದನು.

[ಗಂಗಾವತರಣದ ಈ ಕಥೆ ಎಳೆಯರಿಗಾಗಿಯೇ ಶ್ರೀಮತಿ ನ. ನಾಗರಾಜ ಅವರು ಬರೆದಿರುವ "ಎಳೆಯರ ರಾಮಾಯಣ" ದಿಂದ ತೆಗೆದು ಕೊಂಡದ್ದು. ಈ ಪುಸ್ತಕ ತಿ.ತಿ.ದೇ. ಪ್ರಕಟನ ಶಾಖೆಯಿಂದ ಬಿಡುಗಡೆಯಾಗಿದೆ. –ಸಂ]

★

1—5—81 ರಿಂದ
31—5—81 ವರೆಗೆ

# ನಿಮ್ಮ ಭವಿಷ್ಯ

ಡಾ॥ ಅರ್ಕ ಸೋಮಯಾಜಿ.



## ಮೇಷ :

(ಅಶ್ವಿನಿ, ಭರಣಿ, ಕೃತ್ತಿಕೆ, 1 ನೇ ಪಾದ)

ತಿಂಗಳ ಪ್ರಥಮಾರ್ಧದಲ್ಲಿ ಪ್ರಯಾಣ ಹಾಗೂ ಪ್ರಯಾಸ. ದುಷ್ಟಸಲಹೆ, ಆ ಮೂಲಕವಾದ ಧನನಷ್ಟ. ಅಪಮಾನಗಳ ಬಗ್ಗೆ ಎಚ್ಚರವಹಿಸುವುದುತ್ತಮ. ವಿವಾದ ಗಳಿಂದಾಗಿ ಚಿತ್ತಶಾಂತಿನಾಶ. ಏನೇ ಆದರೂ ಉತ್ಸಾಹದಿಂದ. ಆಶಾಭಾವದಿಂದ ತಿಂಗಳು ಕಳೆಯುತ್ತದೆ.



## ವೃಷಭ :

( ಕೃತ್ತಿಕೆ, ರೋಹಿಣಿ, ಮೃಗಶಿರ 1,2 ಪಾದ)

ತಿಂಗಳ ಪ್ರಥಮಾರ್ಧದಲ್ಲಿ ಅನಗತ್ಯ ವೆಚ್ಚ. ಮಕ್ಕಳ ಬಗ್ಗೆ ತುಸುಚಿಂತೆ. ಕೆಟ್ಟ ಸಲಹೆಗಳಿಂದಾಗಿ ಧನನಷ್ಟ ಹಾಗೂ ಅಪ ಮಾನ. 6 ರ ನಂತರ ಉತ್ಸಾಹ, ಶೃಂಗಾರ ಭಾವ.



## ಮಿಥುನ :

(ಮೃಗಶಿರ, ಆರ್ದ್ರ, ಪುನರ್ವಸು 1,2,3 ಪಾದ)

ತಿಂಗಳ ಪ್ರಥಮಾರ್ಧದಲ್ಲಿ ಧನಲಾಭ. ಬಂಧುಗಳಿಂದ ಚಿಂತೆ. ಆಪ್ತರೊಂದಿಗೆ ವಿವಾದ, ಬೇರ್ಪಡೆ. ದ್ವಿತೀಯಾರ್ಧದಲ್ಲಿ ಅನಗತ್ಯ ವೆಚ್ಚ ಅಥವಾ ಧನನಷ್ಟ. ಕೊನೆಯ ವಾರದಲ್ಲಿ ದುಷ್ಟಸಲಹೆಗಳಿಂದ ಪ್ರವೃತ್ತರಾಗುವ ಸಂಭವವಿದೆ.



## ಕರ್ಕಾಟಕ :

(ಪುನರ್ವಸು 4 ಪಾದ ಪುಷ್ಯ, ಆಶ್ಲೇಷ)

ಗೌರವದ ಔನ್ನತ್ಯವನ್ನು ಹೊಂದಿ. ಪ್ರತಿಭೆಗೆ ಅಧಿಕೃತ ಪುರಸ್ಕಾರ ದೊರೆಯು ವುದು.ಹೇರಳ ಧನಲಾಭ. ಆಗಾಗ ಪ್ರಯಾಣ. ದುಷ್ಟಬುದ್ಧಿ ಯ ಜನರು ತೊಂದರೆ ನೀಡಲು ಯತ್ನಿಸಿದರೂ ಸಫಲರಾಗರು. ಒಳ್ಳೆಯ ಸ್ನೇಹಿತರು, ಆರೋಗ್ಯ, ಹೊಸಉಡುಪು ಪ್ರಣಯಭಾವ, ಸೂಚಿತವಾಗಿವೆ. ದೈವಭಕ್ತಿ ಯಿಂದ ಎಲ್ಲ ವಿಘ್ನನಾಶ.



## ಸಿಂಹ :

(ಮಖ, ಪೂರ್ವ ಫಾಲ್ಗುಣ ಉತ್ತರ 1 ನೇ ಪಾದ:)

ಮೊದಲವಾರದಲ್ಲಿ ಧಾರ್ಮಿಕ ಪ್ರವರ್ತನೆ, ಧನಲಾಭ ಆದರೂ ವೆಚ್ಚಗಳ ತಿಂಗಳು. ಎರಡು ಮೂರನೇ ವಾರಗಳು ಉತ್ತಮ. ಮೊದಲ ಪಕ್ಷದಲ್ಲಿ ತುಸು ಅನಾರೋಗ್ಯ. ದ್ವಿತೀಯ ಪಕ್ಷದಲ್ಲಿ ಪ್ರಯತ್ನಗಳಲ್ಲಿ ಯಶ. ಆಗಾಗ ವಿವಾದ.



## ಕನ್ಯಾ :

(ಉತ್ತರ 2,3,4, ಪಾದ, ಹಸ್ತ ಚಿತ್ತ1,2 ಪಾದ)

ಮೊದಲವಾರ ಒಳಿತೇ ಆದರೂ ನಿರಾಶಾ ವಾದದ ಛಾಯೆ: ಮೊದಲ ಪಕ್ಷದಲ್ಲಿ ತುಸು ಅನಾರೋಗ್ಯ, ಹೆಂಡತಿಯ ಅನಾರೋಗ್ಯ. ಅನಂತರ ಧಾರ್ಮಿಕ ಪ್ರವರ್ತನೆ. ಆಪ್ತ ರಿಂದ ಬೇರ್ಪಡೆ, ಧನಲಾಭ, ಹೊಸಉಡುಪು.



## ತುಲಾ :

(ಚಿತ್ತ 3,4ಪಾದ ಸ್ವಾತಿ, ವಿಶಾಖಾ1,2,3 ಪಾದ)

ಮೊದಲ ಪಕ್ಷದಲ್ಲಿ ಪ್ರಯಾಣ ಅಥವಾ ನೇತ್ರಬಾಧೆ. ಮೊದಲವಾರದಲ್ಲಿ ಸ್ತ್ರೀಯರ ಮೂಲಕ ತೊಂದರೆ. ನಂತರ ಒಳಿತು; ಹೊಸಉಡುಪು; ಪ್ರಣಯಭಾವ. ಹೆಂಡತಿ ಯೊಡನೆ ವಿವಾದ. ಎರಡನೇ ಪಕ್ಷದಲ್ಲಿ ತುಸು ಅನಾರೋಗ್ಯ.



## ವೃಶ್ಚಿಕ :

(ವಿಶಾಖ 4 ಪಾದ, ಅನೂರಾಧ, ಜ್ಯೇಷ್ಠ)

ಈ ರಾಶಿಯವರಿಗೆ ಧನಲಾಭ, ಸುಸ್ನೇಹ ಲಾಭ, ಬಡತಿಗಳುಂಟಾಗಿ ತಿಂಗಳು ಹಿಗ್ಗಿ ತನ್ನು ತರುವುದು. ಮೊದಲರ್ಧ ಸಾಪೇಕ್ಷ ವಾಗಿ ಉತ್ತಮ. ಎರಡನೆಯ ಪಕ್ಷದಲ್ಲಿ ಸ್ತ್ರೀಯರ ಮೂಲಕ ತೊಂದರೆ ಅಥವಾ ವಿವಾದ, ಅಧಾರ್ಮಿಕ ಪ್ರವರ್ತನೆ.



## ಧನುಸ್ಸು :

(ಮೂಲ, ಪೂ. ಉ. 1 ನೇ ಪಾದ)

ವಿಶೇಷವಿಲ್ಲದ ತಿಂಗಳು. ಮೊದಲು ಹಾಗೂ ಕಡೆಯವಾರಗಳು ವಿವಾದಗಳನ್ನು ತರುತ್ತವೆ. ಮೊದಲವಾರದಲ್ಲಿ ಬಂಧು ಆಗಮನ. ಮಕ್ಕಳ ಮೂಲಕ ಚಿಂತೆ. ಮೊದಲ ಪಕ್ಷದಲ್ಲಿ ಸ್ವಲ್ಪ ಅನಾರೋಗ್ಯ, ಎರಡನೆಯ ವಾರ ಸಾಪೇಕ್ಷವಾಗಿ ಉತ್ತಮ. ಗೌರವ ಭಂಗದ ಬಗ್ಗೆ ಎಚ್ಚರ ಅಗತ್ಯ,



**ಮಕರ :**

(ಉ. 2,3,4 ಪಾದ, ಶ್ರವಣ, ಧನಿಷ್ಠ, 1,2 ಪಾದ)

ಧನಲಾಭ, ಅಧಾರ್ಮಿಕ ಪ್ರವರ್ತನೆ ಸೂಚಿತ. ದುಷ್ಟ ಜನರಿಂದ ತೊಂದರೆ. 6 ರಿಂದ 22 ರವರೆಗೆ ಗೃಹಕಲಹ. ತುಸು ಅನಾರೋಗ್ಯ ಸೂಚಿತ. ದುಷ್ಟಸಹವಾಸದ ವಿರುದ್ಧ ಎಚ್ಚರ ಅಗತ್ಯ. ಕಡೆಯ ವಾರದಲ್ಲಿ ಯಶಸ್ಸು.



**ಕುಂಭ :**

(ಧನಿಷ್ಠ 3,4 ಪಾದ ಶತಭಿಷ ಪೂ. ಭಾ. 1, 2, 3ಪಾ)

ಧನಲಾಭ, ಆಪ್ತರಿಂದ ಬೇರ್ಪಡೆ; ಪ್ರಯಾಣ, ಪ್ರಯಾಸ ಸೂಚಿತವಾಗಿವೆ. ಮೊದಲನೇವಾರದಲ್ಲಿ ಸ್ನೇಹಿತರಿಂದ ಕುಮಾರ್ಗದರ್ಶನ. ಕಡೆಯ ವಾರದಲ್ಲಿ ಗೃಹಕಲಹ. ಮೂರನೇ ವಾರದಲ್ಲಿ ಬಂಧು ಆಗಮನ, ಹಿರಿಯರ ಪ್ರಶಂಸೆ.



**ಮೀನ :**

(ಪೂ. ಭಾ. 4 ಪಾದ ಉ. ಭಾ. ರೇವತಿ)

ಪ್ರಯಾಣ, ಪ್ರಣಯಭಾವಸೂಚಿತ- ಅಧಿಕೃತ ಚಿಂತೆ. ಕಳ್ಳತನದಿಂದಾಗಿ ಧನ ನಷ್ಟ. ತಿಂಗಳ ದ್ವಿತೀಯಾರ್ಧದಲ್ಲಿ ಧನ ಲಾಭ, ಹೊಸಉಡುಪು, ಸ್ನೇಹಿತರು. ತಪ್ಪು ಮಾಡುವ ಬಗ್ಗೆ ಎಚ್ಚರ ಅಗತ್ಯ.

★

( 4 ನೇ ಪುಟದಿಂದ )

ವಿದ್ವಾಂಸ, ಸಂತ, ಧರ್ಮಸುಧಾರಕ, ಸಾಮಾಜಿಕ ಹಾಗೂ ನೈತಿಕ ವ್ಯವಸ್ಥಾಪಕ ಆಗಿದ್ದರು. ಕಾಲ ಬದಲಾಯಿಸಿದಂತೆಲ್ಲ ಧರ್ಮವೂ ನಹ ಬದಲಾವಣೆ ಹೊಂದಿ ರಾಷ್ಟ್ರೀಯ ಭಾವನೆ, ಐಕ್ಯತೆ ಸ್ವಾತಂತ್ರ್ಯಗಳನ್ನು ಉದ್ದೀಪಿಸಬೇಕೆಂಬ ತತ್ತ್ವವನ್ನು ಮನಗಂಡು, ಕಾರ್ಯಗತಗೊಳಿಸಿ, ವಿಶ್ವದಲ್ಲಿ ಶ್ರೇಷ್ಠ ಸ್ಥಾನವನ್ನು ಗಳಿಸಲು ಭಾರತಕ್ಕೆ ತುಂಬಾ ನೆರವಾದರು, ಸನಾತನ ಧರ್ಮಕ್ಕೆ ನವಚೇತನ ಹಾಗೂ ಮಾರ್ಗದರ್ಶನ ದೊರಕಿದ ಶಂಕರ ಭಗವತ್ಪಾದರ ಕಾಲವು ಭಾರತೀಯ ಆಧ್ಯಾತ್ಮಿಕ ಚರಿತ್ರೆಯಲ್ಲಿ ಸುವರ್ಣಯುಗವೆನಿಸಿದೆ.

"ಬ್ರಹ್ಮೈಕಂ ಪರಮಾರ್ಥ ಸತ್ತದಿತರನ್
ಮಾಯಾಮಯತ್ವಾನ್ಮೃಷಾ
ಬ್ರಹ್ಮೈವೈಕ ಮುಪಾಧಿ ಬಿಂಬಿತ
ಮತೋ ಜೀವೇಶ ಭಾವಂಗತಮ್ ।
ಭ್ರಾಂತಿಸ್ಸಂಸ್ಕೃತಿರಸ್ಯ ತತ್ರ್ಪಶಮನಂ
ಮುಕ್ತಿಸ್ತದಪ್ಯಾತ್ಮನೋ
ಬ್ರಹ್ಮೈಕ್ಯಾವಗಮಾಚ್ಛ್ರುತಿ-
ಶ್ರವಣಜಾದಿತ್ಯಾಹುರದ್ವೈತಿನಃ ॥"

---

# ವಾರ್ತಾಲಹರಿ

## ಶಾಲಾವರಣ ಬದಲಾವಣೆ

ತಿರುಪತಿಯ ಮೂರನೇ ಯಾತ್ರಿಕ ಸತ್ರದಲ್ಲಿ ತತ್ಕಾಲಿಕವಾಗಿ ನಡೆಯುತ್ತಿದ್ದ ತಿ. ತಿ. ದೇ. ಗಳ ಶ್ರೀ ವೆಂಕಟೇಶ್ವರ ಶಿಲ್ಪಕಲಾಶಾಲೆಯನ್ನು ಕಪಿಲ ತೀರ್ಥದ ರಸ್ತೆಯಲ್ಲಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರ ಕಚೇರಿಯ ಎದುರಿಗಿನ ತಿ.ತಿ.ದೇ ಭವನಕ್ಕೆ ವರ್ಗಾಯಿಸಲಾಗಿದೆ. ವಿಶಾಲವಾದ ಬಯಲು, ಗಾಳಿ ಬೆಳಕುಗಳಿಂದ ಕೂಡಿದ ಈ ಹೊಸ ಭವನದಲ್ಲಿ ಶಾಲೆ ಇತೋಪ್ಯತಿಶಯವಾಗಿ ಬೆಳೆಯುವುದೆಂದು ನಿರೀಕ್ಷಿಸಲಾಗಿದೆ.

## ನಾರಾಯಣವನಂ ದೇವಾಲಯ ಜೀರ್ಣೋದ್ಧಾರ.

ನಾರಾಯಣವನಂನ ಕಲ್ಯಾಣ ವೆಂಕಟೇಶ್ವರ ಸ್ವಾಮಿ ದೇವಾಲಯವನ್ನು ಶ್ರೀ ವೆಂಕಟೇಶ್ವರ ಸ್ವಾಮಿಯ ಭಕ್ತರ ವಿಶೇಷ ಆಸಕ್ತಿಗೆ ಪಾತ್ರವಾಗುವಂತೆ ಮಾಡಲು ತಿ.ತಿ.ದೇ. ಸರ್ವರೀತಿಯ ಪ್ರಯತ್ನಗಳನ್ನೂ ಮಾಡುತ್ತಿದೆ

ಈಚೆಗೆ ಈ ದೇವಾಲಯದ ಮುಖ್ಯಹಾಗೂ ಒಳಗಣ ಗೋಪುರಗಳ ಕಳಶಗಳಿಗೆ 12. 67 ಲಕ್ಷ ರೂಗಳ ವೆಚ್ಚದಲ್ಲಿ ಚಿನ್ನದ ಮುಲಾಮು ಮಾಡಲಾಯಿತು. ಈ ಕಾರ್ಯದಲ್ಲಿ 7.5 ಕಿಲೋ ತೂಕದ ಅಪ್ಪಟ ಚಿನ್ನವನ್ನು ಬಳಸಲಾಗಿದೆ. ದೇವಾಲಯದ ಪ್ರಧಾನ ಹಾಗೂ ಉಪಭಾಗಗಳನ್ನು ಮೂರು ಲಕ್ಷರೂಗಳ ವೆಚ್ಚದಲ್ಲಿ ಜೀರ್ಣೋದ್ಧರಿಸಲಾಯಿತು. ಮಾರ್ಚ್ 1 ರಂದು ಹೊಸ ದೇವಾಲಯದ ಸಂಪ್ರೋಕ್ಷಣಾಮಹೋತ್ಸವ ನಡೆಯಿತು. ತಿರುಪತಿಯಿಂದ 25 ಮೈಲಿ ದೂರದಲ್ಲಿರುವ ನಾರಾಯಣವನಂನಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಯು ಪದ್ಮಾವತಿಯನ್ನು ವಿವಾಹವಾದ ಪೌರಾಣಿಕ ಪ್ರಾಮುಖ್ಯತೆ ಭಕ್ತರಿಗೆ ತಿಳಿದದ್ದೇ ಹೌದು. (ವಿಶೇಷ ಲೇಖನಕ್ಕಾಗಿ ಇದೇ ಸಂಚಿಕೆಯ ಒಳಪುಟಗಳನ್ನು ತಿರಿಗಿಸಿ–ಸಂ.)

## ಸಂಗೀತ ತ್ರಿಮೂರ್ತಿ ಆರಾಧನೆ

ಮಾರ್ಚ್ 26 ರಿಂದ ಮಾರ್ಚ್ 28 ರ ವರೆಗೆ ಮೂರುದಿನಗಳಕಾಲ ತಿರುಪತಿಯ ಶ್ರೀ ವೆಂಕಟೇಶ್ವರ ಸಂಗೀತ ನೃತ್ಯ ಶಾಲೆಯ ಆವರಣದಲ್ಲಿ ಸಂಗೀತ ತ್ರಿಮೂರ್ತಿ ಆರಾಧನೆ, ಸಾಂಸ್ಕೃತಿಕ ಸಂಜೆ, ಕಾಲೇಜು ದಿನಗಳ ಉತ್ಸವಗಳು ನಡೆದವು.

ಮೊದಲನೆಯದಿನ ಬೆಳಗ್ಗೆ 6–30 ಕ್ಕೆ ವೈಭವ ಯುತವಾದ ಮೆರವಣಿಗೆಯಲ್ಲಿ ಸಂಗೀತ ತ್ರಿಮೂರ್ತಿಗಳಾದ ತ್ಯಾಗರಾಜ, ಮುತ್ತುಸ್ವಾಮಿ, ಶ್ಯಾಮಾ ಶಾಸ್ತ್ರಿಗಳ ತೈಲಚಿತ್ರಗಳ ಮೆರವಣಿಗೆ ನಡೆದು ಬೆಳಗ್ಗೆ 8–30 ಕ್ಕೆ ಶ್ರೀಮತಿ ಗೋಪಿಕಾ ಪ್ರಸಾದರು ಆರಾಧನೆಯ ಉದ್ಘಾಟನೆಯನ್ನು ದೀಪ ಹಚ್ಚುವುದರ ಮೂಲಕ ಸಾಂಕೇತಿಕವಾಗಿ ನಿರ್ವಹಿಸಿದರು

ಶ್ರೀ ವೆಂಕಟೇಶ್ವರ ಸಂಗೀತ ನೃತ್ಯಶಾಲೆಯ ವಿದ್ಯಾರ್ಥಿಗಳು, ಶ್ರೀ ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರು, ಶ್ರೀ ವೆಂಕಟೇಶ್ವರ ಕಲಾಪೀಠಂನ ಸಭಾರಂಜನಿ ಕಲಾವಿದರೂ, ನಾದಸ್ವರ ಶಾಲೆಯವರೂ ಅಂದು ಬೆಳಗಿನಿಂದ ರಾತ್ರಿಯ ವರೆಗೆ ಶ್ರೀ ವೆಂಕಟೇಶ್ವರ ಪಂಚರತ್ನಮಾಲೆಯ ಹಾಡುಗಳನ್ನೂ, ಸಂಗೀತ ತ್ರಿಮೂರ್ತಿಗಳ ಕೃತಿಗಳನ್ನೂ ವಿಧವಿಧವಾಗಿ ಬಹುಬಗೆಯಿಂದ ಹಾಡಿ ಪುಷ್ಕಳವಾದ ಸಂಗೀತ ಭೋಜನವನ್ನು ರಸಿಕರಿಗೆ ನೀಡಿದರು

ಮೂರನೆಯದಿನ ನಡೆದ ಸಾಂಸ್ಕೃತಿಕ ಸಂಜೆಯಲ್ಲಿ ಡಾ॥ ಎಸ್. ಬಿ. ರಘುನಾಥಾಚಾರ್ಯರು ಮುಖ್ಯ ಅತಿಥಿಯಾಗಿ ನಮ್ಮ ಸಂಸ್ಕೃತಿಯ ಹಿರಿಮೆ ಗರಿಮೆಗಳನ್ನೂ, ಅದರ ಸಂರಕ್ಷಣೆಯ ಅಗತ್ಯಗಳನ್ನೂ ಕುರಿತು ವಿವರಿಸಿದರು. ಸಭೆಯ ಅಧ್ಯಕ್ಷತೆ ವಹಿಸಿದ ಶ್ರೀ ಬಾಲಾಂತ್ರಪು ರಜನೀಕಾಂತರಾಯರು ಸಂಗೀತ ಸಾಹಿತ್ಯ ಮೊದಲಾದ ಕಲೆಗಳ ಮೂಲಕ ಮಾನವ ಚೇತನ ಮಾಧವನನ್ನು ಮುಟ್ಟುವುದು ಸುಲಭವೆನ್ನುತ್ತ, ಆ ದಿಸೆಯಲ್ಲಿ ಪ್ರಯತ್ನಿಸುವುದು ಇಂದಿನ ಕರ್ತವ್ಯವೆಂದರು.

28—3—81 ರಂದು ಸಂಗೀತ ನೃತ್ಯಶಾಲೆ. ಹಾಗೂ ನಾದಸ್ವರಶಾಲೆಗಳ ವಾರ್ಷಿಕೋತ್ಸವವು ನಡೆಯಿತು. ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಶ್ರೀ ಕೆ. ಪೆಂಚಿಲಯ್ಯ ಅವರು ಮುಖ್ಯ ಅತಿಥಿಯಾಗಿದ್ದ ಈ ಸಮಾರಂಭದಲ್ಲಿ ಶ್ರೀ ಪದ್ಮಾವತಿ ಬಾಲಿಕೆಯರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯಿನಿ ಶ್ರೀಮತಿ ವಿ. ಪಿ. ಪ್ರಫುಲ್ಲಾಬಾಯಿ ಅವರು ಬಹುಮಾನ ವಿತರಣೆ ಮಾಡಿದರು.

## ನಾಟ್ಯಾವಧಾನ.

ನಾಟ್ಯಾವಧಾನವೆಂದರೆ ತುಂಬಿದ ಸಭೆಯಲ್ಲಿ ಪ್ರೇಕ್ಷಕರ ಮಧ್ಯದಿಂದ ಒಬ್ಬರು ಸೂಚಿಸಿದ ಸನ್ನಿವೇಶವನ್ನು ಅತಿಕಡಮೆ ಸಮಯದಲ್ಲಿ ಅಭಿನಯಿಸಿ ತೋರುವುದು. ಈ ಸನ್ನಿವೇಶ ಕಾಲ್ಪನಿಕವಾಗಿರಬಹುದು, ಹಿಂದಿನ ಸಾಹಿತ್ಯ, ಪುರಾಣ ಇತಿಹಾಸದ್ದಾಗಿರಬಹುದು. ಇಂತಹ ಅವಧಾನ ಆಂಧ್ರ ಪ್ರದೇಶದಲ್ಲಿ ಹುಟ್ಟಿದ್ದು ಈಚೆಗೆ. ಇದರ ಪ್ರವರ್ತಕ ಶ್ರೀ ರಾಮನಾಥಶಾಸ್ತ್ರಿ. (ಕರ್ನಾಟಕದಲ್ಲಿಯೂ ಮೈಸೂರಿನತ್ತ ಈ ರೀತಿಯ ನಾಟ್ಯಾವಧಾನ ಪ್ರಚಲಿತವಿದೆಯಾದರೂ ಬೆಳಕಿಗೆ ಬಂದಿರುವುದು ಕ್ವಚಿತ್ತಾಗಿಯಷ್ಟೆ.)

ಈಚೆಗೆ ತಿರುಪತಿಯ ಪ್ರಾಚ್ಯಕಳಾಶಾಲೆಯ ವಾರ್ಷಿಕೋತ್ಸವ ಸಂದರ್ಭದಲ್ಲಿ ಇಂತಹ ನಾಟ್ಯಾವಧಾನ ಅದರ ಪ್ರವರ್ತಕರಿಂದಲೇ ನಡೆದು ಅಪಾರ ಜನಮನ್ನಣೆ ಗಳಿಸಿತು.

ವಾರ್ಷಿಕೋತ್ಸವ ಸಮಾರಂಭದ ಮುಖ್ಯ ಅತಿಥಿಯಾಗಿ ಮಾತನಾಡಿದ ಶ್ರೀ ಅನ್ನಮಾಚಾರ್ಯ ಸಾಹಿತ್ಯ ಸಂಪಾದಕ, ಶತವಧಾನಿ ಶ್ರೀ ರಾಮ ಸುಬ್ಬಶರ್ಮ ಅವರು ಅವಧಾನದ ವಿವರಗಳನ್ನು ನೀಡಿ, ನಾಟ್ಯಾವಧಾನವೆನ್ನುವುದು ದೃಶ್ಯಾವಧಾನದ ಅತಿ ಶ್ರೇಷ್ಠ ವಿಧಾನವೆಂದು ತಿಳಿಸುತ್ತ ಶ್ರೀ ಧಾರಾ ರಾಮನಾಥಶಾಸ್ತ್ರಿಯವರನ್ನೂ ಅವರಿಗೆ ಈ ಕಾರ್ಯದಲ್ಲಿ ಸಹಾಯಕರಾದ ಅವರ ಸೋದರ ಶ್ರೀ ಧಾರಾ ರಾಧಾಕೃಷ್ಣಮೂರ್ತಿ ಅವರನ್ನೂ ಅಭಿನಂದಿಸಿದರು.

ಪ್ರೇಕ್ಷಕ ಸಮೂಹದಲ್ಲಿನ ಡಾ॥ ಸರ್ವೋತ್ತಮನ್, ಮೊದಲಾದವರು ಸೂಚಿಸಿದ ಸನ್ನಿವೇಶಗಳನ್ನು ನಾಟ್ಯಾವಧಾನಿಗಳು ನಟಿಸಿ ತೋರಿದರು. ತೆಲುಗು ಸಾಹಿತ್ಯದ ಎರಡು ವಿರುದ್ಧ ಗತಿಯ ಪಾತ್ರಗಳನ್ನು ಒಟ್ಟಿಗೆ ಸೇರಿಸುವಿಕೆ, ರಾಣಾಪ್ರತಾಪಸಿಂಹನ ಏಕಪಾತ್ರಾಭಿನಯದಲ್ಲಿನ ಆಂದೋಳನ, ಜಮದಗ್ನಿ ಪರಶುರಾಮ ಪ್ರಸಂಗಗಳು ಸಭಿಕರನ್ನು ಮಂತ್ರಮುಗ್ಧರನ್ನಾಗಿಸಿದವು.

ಕಾಲೇಜಿನ ಅಧ್ಯಾಪಕ ಶ್ರೀ ನಾಗಸಿದ್ಧಾರೆಡ್ಡಿ ಅವರು ವ್ಯಾಖ್ಯಾನಕರ್ತರಾಗಿ ಕಾರ್ಯಕ್ರಮವನ್ನು ನಿರ್ವಹಿಸಿದರು.

★

# ಅನ್ನಮಾಚಾರ್ಯ ವರ್ಧಂತಿ ಉತ್ಸವಗಳು

ತಿರುಪತಿಯಲ್ಲಿ ಏಪ್ರಿಲ್ 2 ರಿಂದ 8 ರ ವರೆಗೆ ಪದಕವಿತಾಪಿತಾಮಹ ಅನ್ನಮಾಚಾರ್ಯ ವರ್ಧಂತಿ ಉತ್ಸವಗಳು ವಿಜೃಂಭಣೆಯಿಂದ ನಡೆದವು.

ಏಳು ದಿನಗಳ ಬೆಳಗ್ಗೆ ಸಂಜೆಯ ಸಂಗೀತೋಪನ್ಯಾಸ ಕಾರ್ಯಕ್ರಮಗಳಲ್ಲಿ ಆಂಧ್ರಪ್ರದೇಶದ ಹೆಸರಾಂತ ಗಾಯಕ, ವಿದ್ವಾಂಸರು ಭಾಗವಹಿಸಿದ್ದರು. ತಿ. ತಿ. ದೇ. ಆಸ್ಥಾನ ವಿದ್ವಾಂಸರಾದ ಶ್ರೀಮತಿ ಎಂ. ಎಲ್. ವಸಂತಕುಮಾರಿ, ಶ್ರೀ ನೂಕಲ ಚಿನ ಸತ್ಯನಾರಾಯಣ, ಶ್ರೀಮತಿ ಮಣಿ ಕೃಷ್ಣಸ್ವಾಮಿ, ಶ್ರೀಮತಿ ಎಂ. ಎಸ್. ಸುಬ್ಬುಲಕ್ಷ್ಮಿ, ಶ್ರೀ ನೆದುನೂರಿ ಕೃಷ್ಣಮೂರ್ತಿ, ಶ್ರೀ ಸಂಧ್ಯಾವಂದನಂ ಶ್ರೀನಿವಾಸರಾವ್, ಶ್ರೀ ಚಿಟ್ಟಿಬಾಬು, ಡಾ॥ ಶ್ರೀಪಾದ ಪಿನಾಕಪಾಣಿ, ಶ್ರೀ ಲಾಲ್‌ಗುಡಿ ಜಯರಾಮನ್, ಕುಮಾರಿ ಶ್ರೀರಂಗಂ ಗೋಪಾಲರತ್ನಂ ಅವರುಗಳೂ, ಶ್ರೀಮತಿ ಪಿ. ಸುಶೀಲ, ಕುಮಾರಿ ಶೋಭಾರಾಜು, ಶ್ರೀ ಎಸ್. ರಾಜೇಶ್ವರರಾವ್ ಮೊದಲಾದವರೂ ತಮ್ಮ ಗಾಯನದಿಂದ ಅಸಂಖ್ಯ ಶ್ರೋತೃಗಳನ್ನು ರಂಜಿಸಿದರು.

ಮೊದಲನೆಯ ದಿನ 2–4–81 ರಂದು ಆರಾಧನೆಯನ್ನು ಉದ್ಘಾಟಿಸುತ್ತ ಶ್ರೀ ಡಿ. ಪಶುಪತಿ ವೃಂದದವರು "ದಿನಮು ದ್ವಾದಶಿ ನೇಡು" ಹಾಡನ್ನು ಹಾಡಿದರು. ಶ್ರೀ ರಜನೀಕಾಂತರಾಯರ ಛಂದೋಬದ್ಧ ಸ್ವಾಗತಗೀತೆ, ಶ್ರೀ ರಾಮಸುಬ್ಬಶರ್ಮ, ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲುಶೆಟ್ಟಿಯವರಗಳ ವರದಿ ವಾಚನಗಳ ನಂತರ ಅನ್ನಮಾಚಾರ್ಯ ಪ್ರಾಜೆಕ್ಟ್ ಬಗ್ಗೆ ಶ್ರೀ ಪಿ.ವಿ.ಆರ್.ಕೆ. ಪ್ರಸಾದರು ಮಾತನಾಡಿದರು. ಜನ ಆದರಿಸುವಂತಹ ಕಾರ್ಯಕ್ರಮಗಳಿಗೆ ಹೆಚ್ಚಿನ ಹಣ ವೆಚ್ಚವಾಗದು ಎಂದು ತಿಳಿಸಿದ ಅವರು ಈ ಯೋಜನೆಗಳು ಶ್ರೀಸಾಮಾನ್ಯನನ್ನು ಮುಟ್ಟುವಂತೆ ಮಾಡುವುದೇ ತಿ.ತಿ.ದೇ. ಗಳ ಉದ್ದೇಶವೆಂದರು. ಶ್ರೀ ಫಾಲ್ಘಾಟ್ ಮಣಿ ಅಯ್ಯರ್ ಅವರನ್ನೂ ಶ್ರೀ ಸಂಗಮೇಶಂ ಅವರನ್ನೂ, ಅನ್ನಮಾಚಾರ್ಯ ವಂಶಸ್ಥರನ್ನೂ ಸನ್ಮಾನಿಸಲಾಯಿತು.

3–4–81 ರಂದು ಬೆಳಗ್ಗೆ ಉಪಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ವೆಂಕಟೇಶ್ವರುಲು ಅವರ ಅಧ್ಯಕ್ಷತೆಯಲ್ಲಿ ಶ್ರೀ ಎಸ್. ಆರ್. ಜಾನಕೀರಾಮನ್ ಅವರು ಅನ್ನಮಾಚಾರ್ಯಕೃತಿಗಳ ಹಾಡುವಿಕೆಯ ಬಗ್ಗೆ ವಿವರಗಳನ್ನು ನೀಡಿದರು.

4–4–81 ರಂದು ಬೆಳಗ್ಗೆ ಸಪ್ತಗಿರಿಯ ಸಂಪಾದಕ ಶ್ರೀ ಕೆ. ಸುಬ್ಬರಾವ್ ಅವರ ಅಧ್ಯಕ್ಷತೆಯಲ್ಲಿ ಶ್ರೀಗೌರಿಪೆದ್ದಿ ರಾಮಸುಬ್ಬ ಶರ್ಮರು ಅನ್ನಮಾಚಾರ್ಯ ಕೃತಿಗಳ ಶೃಂಗಾರ ಭಾವ ವಿವರಣೆ ನೀಡಿದರು. ಶ್ರೀ ಕೆ. ಸುಬ್ಬರಾವ್ ಅವರು ಮಾತನಾಡುತ್ತ ಅನ್ನಮಾಚಾರ್ಯ ಕೃತಿಗಳು ಸಾಹಿತ್ಯ ಪ್ರಧಾನವಾಗಿ ದೃಶ್ಯರೂಪಕಗಳು ಎಂದೂ ಪ್ರಾಜೆಕ್ಟ್ ಆ ದಿಕ್ಕಿನಲ್ಲಿ ಯೋಚಿಸಬೇಕೆಂದೂ ಕರೆ ನೀಡಿದರು.

5–4–81 ರಂದು ಪೌರಸಂಬಂಧ ಶಾಖಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣಮೂರ್ತಿ ಅವರ ಅಧ್ಯಕ್ಷತೆಯಲ್ಲಿ ಶ್ರೀ ವೈ. ಶ್ರೀನಿವಾಸರಾವ್ ಅವರು ಉಪನ್ಯಾಸ ನೀಡಿದರು.

6–4–81 ರಂದು ಧಾರ್ಮಿಕ ಶಿಕ್ಷಣ ಕೇಂದ್ರದ ಪ್ರಿನ್ಸಿಪಾಲ್ ನಾಗಯ್ಯ ಅವರ ಅಧ್ಯಕ್ಷತೆಯಲ್ಲಿ ಡಾ॥ ಜೆ. ಚೆನ್ನಾರೆಡ್ಡಿ ಯವರು ಅನ್ನಮಾಚಾರ್ಯಕೃತಿಗಳಲ್ಲಿನ ಸೊಬಗು ಲಾಲಿತ್ಯಗಳ ಬಗ್ಗೆ ವಿವರಿಸಿದರು.

7–4–81 ರಂದು ತಿ.ತಿ.ದೇ. ವಿದ್ಯಾಧಿಕಾರಿ ಶ್ರೀ ರಂಗಯ್ಯ ಅವರ ಅಧ್ಯಕ್ಷತೆಯಲ್ಲಿ ಖ್ಯಾತ ವಿದ್ವಾಂಸ ಶ್ರೀ ದಿವಾಕರ್ಲ ವೆಂಕಟಾವಧಾನಿ ಅವರ ಅನ್ನಮಾಚಾರ್ಯರ ಅದ್ವಿತೀಯಪ್ರತಿಭೆಯ ಬಗ್ಗೆ ಉಪನ್ಯಾಸಮಾಡಿದರು.

ಅದೇದಿನ ಸಂಜೆ ಶ್ರೀ ವೆಂಪಟಿ ಚಿನ ಸತ್ಯಂ (ತಿ.ತಿ.ದೇ. ಆಸ್ಥಾನ ನಾಟ್ಯಾಚಾರ್ಯ) ಅವರ ನಿರ್ದೇಶನದಲ್ಲಿ ಕುಮಾರಿ ಶೋಭಾ ನಾಯುಡು ಅವರು ಅನ್ನಮಾಚಾರ್ಯ ಕೃತಿಗಳ ನಾಟ್ಯವನ್ನು ನೀಡಿದರು.

8–4–81 ರಂದು ನಡೆದ ಸಮಾರೋಪ ಸಮಾರಂಭದಲ್ಲಿ ಆಂಧ್ರಪ್ರದೇಶದ ಮಂತ್ರಿಸಂಪುಟದ ಶ್ರೀ ಭಟ್ಟಂ ಶ್ರೀರಾಮಮೂರ್ತಿಯವರು ಭಾಗವಹಿಸಿದ್ದರು. ಇದೇ ಸಭೆಯಲ್ಲಿ 'ಅನ್ನಮಾಚಾರ್ಯ ಶೃಂಗಾರ ಸಂಕೀರ್ತನೆ'ಗಳ ಹೊಸ ಸಂಪುಟವನ್ನು 'ಅನ್ನಮಾಚಾರ್ಯ ಸಾಹಿತಿ ಕೌಮುದಿ'ಯನ್ನೂ ಬಿಡುಗಡೆ ಮಾಡಲಾಯಿತು.

ಸಂಸ್ಕೃತಿ ಇಲಾಖೆಯ ಮಂತ್ರಿ ಶ್ರೀ ಭಟ್ಟಂ ಅವರು ಸರಕಾರದ ಸಂಸ್ಕೃತಿ ಪ್ರಸಾರ ಕಾರ್ಯಗಳಲ್ಲಿ ತಿ.ತಿ.ದೇ. ಗಳ ಆದರ್ಶವನ್ನು ಕಾರ್ಯರೀತಿಯನ್ನು ತಾವು ಅನುಸರಿಸುವುದಾಗಿ ಹೇಳಿದರು.

## ಕರ್ನಾಟಕದಲ್ಲಿ

### ಚಿಕ್ಕಬಳ್ಳಾಪುರದಲ್ಲಿ ಪೇಜಾವರ ಶ್ರೀಗಳು

ಉಡುಪಿ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು ಚಿಕ್ಕಬಳ್ಳಾಪುರದ ಚಾಮರಾಜ ಪೇಟೆ ಹರಿಜನ ಕಾಲೋನಿಯಲ್ಲಿ ವಿಶ್ವಹಿಂದೂ ಪರಿಷತ್ತಿನವರು ನಡೆಸುತ್ತಿರುವ ಸಂಸ್ಕಾರ ಕೇಂದ್ರಕ್ಕೆ ಈಚೆಗೆ ಭೇಟಿ ನೀಡಿ, ಅಲ್ಲಿನ ನಾಗರಿಕ ಸೌಲಭ್ಯಗಳ ಬಗ್ಗೆ ವಿಚಾರಿಸಿ ಉತ್ತಮ ಮಟ್ಟದ ಸಂಸ್ಕಾರವನ್ನು ಈ ಕೇಂದ್ರದಲ್ಲಿ ಪಡೆಯುತ್ತಿರುವುದರ ಬಗ್ಗೆ ಮೆಚ್ಚಿಗೆ ವ್ಯಕ್ತಪಡಿಸಿದರು. ಶ್ರೀಗಳವರನ್ನು ವಿಶ್ವ ಹಿಂದೂ ಪರಿಷತ್ತಿನ ಕೋಲಾರ ಜಿಲ್ಲಾ ಕಾರ್ಯದರ್ಶಿ ಶ್ರೀ ಗೋಖಲೆ ಸುಬ್ಬರಾಮಯ್ಯನವರು ಕೇಂದ್ರಕ್ಕೆ ಸ್ವಾಗತಿಸಿ ಪರಿಚಯ ಮಾಡಿಕೊಟ್ಟರು.

ಶ್ರೀಗಳವರು ಮಾತನಾಡಿ "ಹರಿಜನರು ತಮ್ಮ ಮಕ್ಕಳನ್ನು ದುಃಶ್ಚಟಗಳಿಂದ ದೂರವಿರಿಸಿ, ಅವರಿಗೆ ಶಿಕ್ಷಣ ಕೊಡಿಸಬೇಕೆಂದು ಹೇಳಿದರು. ಹಿಂದುಳಿದ ಬಾಂಧವರ ಏಳಿಗೆಯಾಗದೆ ಹಿಂದೂಸಮಾಜ ಉನ್ನತಿಯನ್ನು ಸಾಧಿಸಲಾಗದು ಎಂದರು.

ವಾಸವೀ ಧರ್ಮಶಾಲೆಯಲ್ಲಿ ವಿಶ್ವಹಿಂದೂ ಪರಿಷತ್ತಿನ ಚಿಕ್ಕಬಳ್ಳಾಪುರ ಶಾಖೆ ಏರ್ಪಡಿಸಿದ್ದ ಸಭೆಯಲ್ಲಿ ಮಾತನಾಡುತ್ತ ಶ್ರೀ ಶ್ರೀಗಳು "ಹಿಂದೂ ಧರ್ಮವೆಂದರೆ ಕೇವಲ ದೇವಸ್ಥಾನ–ಪೂಜೆಗಳಲ್ಲ, ದೀನದಲಿತರ ಸೇವೆಯು ಧರ್ಮದ ಅಂಗ, ದೀನದಲಿತರ ಸೇವೆಗೆ ಹೆಚ್ಚು ಗಮನ ನೀಡಬೇಕೆಂದು ಕರೆ ನೀಡಿದರು.

ಶ್ರೀಗಳವರ ಭೇಟಿಯಿಂದ ಹಿಂದೂಜನ ಮನದಲ್ಲಿ ಹೊಸ ಚೈತನ್ಯಮಾಡಿದಂತಾಗಿದೆ.

ಸಭೆಗಳಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳ ಹಿಂದೂಧರ್ಮ ರಕ್ಷಣ ಸಂಸ್ಥೆಯ ವತಿಯಿಂದ ಧಾರ್ಮಿಕ ಸಾಹಿತ್ಯವನ್ನು ಉಚಿತವಾಗಿ ಹಂಚಲಾಯಿತು ಎಂದು ವರದಿಯಾಗಿದೆ.

Edited and Published on behalf of the T. T. Devastanams by K. Subba Rao, M. A., and Printed at
T. T. D. Press by M. Vijayakumar Reddy, Manager, T. T. D. Press, Tirupati - 517 501·

# ಶ್ರೀ ವೇಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.
# ವಿವಿಧ ಆರ್ಜಿತ ಉತ್ಸವಗಳ ಪರಿಷ್ಕೃತ ದರಗಳ ವಿವರಣೆ

## 1. ದರ್ಶನಗಳು

| | | |
|---|---|---|
| 1 | ವಿಶೇಷ ಪ್ರವೇಶ | ರೂ. 25 |

## 2. ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ | ರೂ. 200 |
| 2. | ಅಭಿಷೇಕ (ಪುಲಿಕಾಪುಸೇವ) | ರೂ. 500 |
| 3. | ಗಂಬುರಗಿನ್ನೆ | ರೂ. 300 |
| 4. | ಪುನುಗುಗಿನ್ನೆ | ರೂ. 200 |
| 5. | ಜಾಫ್ರಾಗಿನ್ನೆ | ರೂ. 100 |
| 6. | ಕಸ್ತೂರಿಗಿನ್ನೆ | ರೂ. 100 |
| 7. | ಸಹಸ್ರಕಲಶಾಭಿಷೇಕ | ರೂ. 2500 |
| 8. | ತಿರುಪ್ಪಾವಡ | ರೂ. 5000 |
| 9. | ಕೋವಿಲ್ ಆಳ್ವಾರು ತಿರುಮಂಜನ | ರೂ. 1745 |
| 10. | ಐನಾ ಮಹಲಿನಲ್ಲಿನ ಡೋಲೋತ್ಸವ | ರೂ. 1000 |

## 3. ಉತ್ಸವಗಳು

| | | |
|---|---|---|
| 1. | ವಸಂತೋತ್ಸವ | ರೂ. 2500 |
| 2. | ಕಲ್ಯಾಣೋತ್ಸವ | ರೂ. 1500 |
| 3. | ಬ್ರಹ್ಮೋತ್ಸವ | ರೂ. 750 |

## 4. ವಾಹನಗಳು

1. ಸರ್ವಭೂಪಾಲವಾಹನ–ವಜ್ರಕವಚಸೇವೆ ಬಂಗಾರದ ಗರುಡ, ಕಲ್ಪವೃಕ್ಷ, ದೊಡ್ಡ ಶೇಷ ಸರ್ವಭೂಪಾಲ ಸೂರ್ಯಪ್ರಭ–ಒಂದೊಂದು ವಾಹನ — ರೂ. 125
2. ಬೆಳ್ಳಿಯಗರುಡ, ಚಿಕ್ಕಶೇಷ, ಚಂದ್ರಪ್ರಭೆ, ಆನೆ, ಕುದುರೆ, ಹಂಸ, ಹನುಮಂತ ಒಂದೊಂದು ವಾಹನ ಸೇವೆ — ರೂ. 100

ಮೂವರಿಗೆ ಮಾತ್ರ ಪ್ರವೇಶ.

## 5. ಅನ್ನಪ್ರಸಾದಗಳು (ಕಾಲಸೋಲ)

| | | |
|---|---|---|
| 1 | ದಧ್ಯೋದನ | ರೂ. 75 |
| 2 | ಪುಳಿಯೋಗರೆ (ಚಿತ್ರಾನ್ನ) | ರೂ. 75 |
| 3. | ಪೊಂಗಲ್ | ರೂ. 100 |
| 4 | ಸಕ್ಕರೆ ಪೊಂಗಲ್ | ರೂ. 100 |
| 5 | ಸಾಕರಬಾತ್ | ರೂ. 125 |
| 6. | ಕೇಸರಿಬಾತ್ | ರೂ. 125 |
| 7 | ಪಾಯಸ | ರೂ. 125 |
| 8. | ಸೀರಾ | ರೂ. 200 |

## 6 ಪಡಿ ಪ್ರಸಾದಗಳು

| | | |
|---|---|---|
| 1. | ಅಪ್ಪವು | ರೂ. 250 |
| 2. | ಲಾಡು | ರೂ. 600 |
| 3. | ವಡೆ | ರೂ. 350 |
| 4. | ಹೋಳಿ | ರೂ. 250 |
| 5. | ದೋಸೆ | ರೂ. 250 |
| 6. | ತೇನೆತೊಳ | ರೂ. 250 |
| 7. | ಸುಖಿಯವು | ರೂ. 250 |
| 8. | ಜಿಲೇಬಿ | ರೂ. 600 |

## 7. ನಿತ್ಯ ಸೇವೆಗಳು

| | | |
|---|---|---|
| 1. | ಕರ್ಪೂರ ಆರತಿ | ರೂ. 150 |
| 2. | ನವನೀತ ಆರತಿ | ರೂ. 400 |
| 3. | ಅರ್ಚನೆ | ರೂ. 200 |
| 1) | ಶಾಶ್ವತ ನಿತ್ಯ ಕರ್ಪೂರ ಆರತಿ | ರೂ. 3000 |
| 2) | ಶಾಶ್ವತ ನಿತ್ಯ ನವನೀತ ಆರತಿ | ರೂ. 8000 |
| 3) | ಶಾಶ್ವತ ನಿತ್ಯ ಅರ್ಚನೆ | ರೂ. 4000 |

ಪರಾ :— (1) ಸಹಸ್ರ ಕಲಶಾಭಿಷೇಕ ಪ್ರತಿ ಬುಧವಾರ, ತಿರುಪ್ಪಾವಡ ಪ್ರತಿ ಗುರುವಾರ ಜರುಗುವುವು.

(2) ಆಮಂತ್ರಣೋತ್ಸವಕ್ಕೆ ಐವರಿಗೆ ಬದಲಾಗಿ ಇಬ್ಬರೇ ಅನುಮತಿಸಲ್ಪಡುವರು.

(3) ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್ ಸೇವೆ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ್ನ 1 ಗಂಟೆ ರಾತ್ರಿ 8 ಗಂಟೆ ನಡುವೆ ಜರುಗುವುವು.

(4) ವಿಶೇಷ ಪ್ರವೇಶದ ಟಿಕೆಟ್ಟಿನವರು ಹಿಂದಿನಂತೆ ಧ್ವಜಸ್ತಂಭದ ಹತ್ತಿರವಲ್ಲದೆ ಮಹಾದ್ವಾರದ ಹತ್ತಿರ ಸರತಿಯ ಸಾಲಿನಲ್ಲಿ ಸೇರಿಸಲ ಡುವರು,

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲ ತಿರುಪತಿ ದೇವಸ್ಥಾನ
ತಿರುಪತಿ–517 501

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/ ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಆರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು (ಏಕಾಂತ)
,, 5–00 ರಿಂದ 7–00 ವರೆಗೆ ಅಭಿಷೇಕ (ಆರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ, ಬಲಿ, ಶಾತ್ತುಮೊರೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ಅರ್ಚನೆ, ತೋಮಾಲಸೇವೆ, ಅಭಿಷೇಕ ಸಮಯಗಳಲ್ಲಿ ಅಭಿಷೇಕಾನಂತರ ದರ್ಶನ ಟಿಕೆಟ್ಟುಗಳಾಗಲಿ, ವಿಶೇಷ ದರ್ಶನದ ಟಿಕೆಟ್ಟುಗಳಾಗಲಿ ಅನುಮತಿಸಲ್ಪಡುವುದಿಲ್ಲ. ಸರ್ವದರ್ಶನ ಸಮಯದಲ್ಲಿ ರೂ. 25/– ಟಿಕೆಟ್ಟುಗಳವರೂ ಸಹ ಅನುಮತಿಸಲ್ಪಡುವರು.

3. ಆಮಂತ್ರಣೋತ್ಸವದ ರೂ 200/– ಟಿಕೆಟ್ಟು ಮೇಲೆ ಐವರಿಗೆ ಬದಲಾಗಿ ಇಬ್ಬರು ಮಾತ್ರವೇ ಅನುಮತಿಸಲ್ಪಡುವರು.

4. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ 1–00 ರಿಂದ 7–00 ನಡುವೆ ಜರುಗುವುವು.



ಇದನಾದರೂ ಕೊಡದಿದ್ದರೆ ನಿನ್ನ
ಪದಕಮಲವ ನಂಬಿ ಭಜಿಸುವುದೆಂತೊ ॥ ಪ ॥

ಗ್ರಾಸವಾಸಗಳಿಗೆ ಇಲ್ಲವೆಂದು ನಿನ್ನ
ಬೇಸತ್ತು ಬೇಡ ಬಂದುದಿಲ್ಲ
ವಾಸುದೇವನೆ ನಿನ್ನ ದಾಸರ ದಾಸರ
ದಾಸ್ಯವ ಕೊಡು ಎಂದರೆ 1

ಒಡವೆಗಳಲ್ಲಿ ವಡ್ಯಾಣಗಳಿಲ್ಲವೆಂದು
ಬಡವನೆಂದು ಬೇಡ ಬಂದುದಿಲ್ಲ
ಒಡೆಯ ನಿನ್ನಡಿಗಳಿಗೆರಗುವುದಕೆ ಮನ
ವಿಡುತಿಹುದೊಂದನು ಕೊಡು ಸಾಕೆಂದರೆ 2

ಸತಿಸುತರುಗಳಿಂದ ಸಹಿತವಾಗಿ ನಾನು
ಹಿತದಿರಬೇಕೆಂದು ಬಂದುದಿಲ್ಲ
ಇತರ ವಿಷಯಕ್ಕೆರಗುವ ಮನಸಿಗೆ ನಿನ್ನ
ಷತತ ಕಥಾಮೃತ ಕರುಣಿಸು ಎಂದರೆ 3

ಸಾಲವಾಯಿತು ಇನ್ನು ಸಂಬಳವೆನಗೆ
ಸಾಲದೆಂದು ಬೇಡಬಂದುದಿಲ್ಲ
ನಾಲಗೆಯಲಿ ನಿನ್ನ ನಾಮಾಮೃತವನ್ನು
ಕಾಲಕಾಲದಿ ಪಾಲಿಸಬೇಕೆಂದರೆ 4

ಶ್ರೀಪಾದರಾಜರು.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ಶ್ರೀನಿವಾಸಮಂಗಾಪುರ

**ಸಂದರ್ಶಿಸಿ** **ಅನುಗ್ರಹೀತರಾಗಿ**



1981 ನೇ ಜುಲೈ 7 ರಂದು ಶ್ರೀ ವೆಂಕಟೇಶ್ವರಸ್ವಾಮಿಯವರ ಸಾಕ್ಷಾತ್ಕಾರ ವೈಭವ ಉತ್ಸವವು ನಡೆಯಲಿದೆ. ಆಸ್ತಿಕ ಜನರು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಬೇಕೆಂದು ಕೋರಲಾಗಿದೆ.

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ.**

---

## ಸಪ್ತಗಿರಿ ಚಂದಾದಾರರಲ್ಲಿ

ವಾರ್ಷಿಕ ಚಂದಾ ರೂ. 6–00

ಸಪ್ತಗಿರಿ ಮಾಸಪತ್ರಿಕೆಯ ಚಂದಾದಾರರುಗಳಲ್ಲಿ ಕೆಳಕಂಡವರ ಚಂದಾಗಳು 31–7–81 ತಾರೀಖಿಗೆ ಮುಗಿಯಲಿವೆ. ಚಂದಾದಾರರು ಸಹಾನುಭೂತಿಯಿಂದ ಹಣವನ್ನು ಮನಿಯಾರ್ಡರು ಮೂಲಕ ಕಳುಹಿಸಿ ಕೊಡಬೇಕೆಂದು ಕೋರುತ್ತೇವೆ. ಚಂದಾದಾರರು ದಯವಿಟ್ಟು ಮನಿಯಾರ್ಡರು ಕೂಪನಿನಲ್ಲಿ ತಮ್ಮ ಚಂದಾ ಸಂಖ್ಯೆಯನ್ನು ನಮೂದಿಸಬೇಕು.

29, 46, 67, 99, 140, 144, 180, 186, 200, 322, 340, 355, 630, 632, 633, 635, 637, 638, 640, 655, 657, 1100, 1158 to 1165, 1168 to 1172, 1174 to 1193, 1195 to 1206, 1209, 1210, 1211, 1223, 1224, 1304.

ಚಂದಾ ಹಣವನ್ನು ಎಮ್. ಓ. ಮೂಲಕ ಕೆಳಗಿನ ವಿಳಾಸಕ್ಕೆ ಕಳುಹಿಸಬೇಕು. ಚೆಕ್ಕುಗಳನ್ನು ಕಳುಹಿಸಿದ್ದಲ್ಲಿ, ಅಥವಾ ವಿಳಾಸ ತಪ್ಪಿದಲ್ಲಿ, ಆಗುವ ಆಲಸ್ಯಕ್ಕೆ ಯಾವ ವಿಧದಲ್ಲೂ ಈ ಕಾರ್ಯಾಲಯ ಬಾಧ್ಯತೆ ವಹಿಸಲಾರದು. ಚಂದಾದಾರರೆಲ್ಲರೂ ಸಹೃದಯತೆಯಿಂದ ಚಂದಾ ಕಳುಹಿಸಬೇಕೆಂದು ವಿನಂತಿ. ಮಿಕ್ಕ ವಿವರಗಳಿಗೆ :

ವೆಲ್‌ಫೇರ್ ಆಫೀಸರ್,
ಸೇಲ್ಸ್ ವಿಂಗ್,
ತಿ. ತಿ. ದೇ. ಪ್ರೆಸ್ ಕಾಂಪೌಂಡ್
**ತಿರುಪತಿ.**

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ಶ್ರೀನಿವಾಸಮಂಗಾಪುರ

**ಸಂದರ್ಶಿಸಿ**  **ಅನುಗ್ರಹೀತರಾಗಿ**

1981 ನೇ ಜುಲೈ 7 ರಂದು ಶ್ರೀ ವೆಂಕಟೇಶ್ವರಸ್ವಾಮಿಯವರ ಸಾಕ್ಷಾತ್ಕಾರ ವೈಭವ ಉತ್ಸವವು ನಡೆಯಲಿದೆ. ಆಸ್ತಿಕ ಜನರು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಬೇಕೆಂದು ಕೋರಲಾಗಿದೆ.

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ.**

---

## ಸಪ್ತಗಿರಿ ಚಂದಾದಾರರಲ್ಲಿ

**ವಾರ್ಷಿಕ ಚಂದಾ ರೂ. 6–00**

ಸಪ್ತಗಿರಿ ಮಾಸಪತ್ರಿಕೆಯ ಚಂದಾದಾರರುಗಳಲ್ಲಿ ಕೆಳಕಂಡವರ ಚಂದಾಗಳು 31–7–81 ತಾರೀಖಿಗೆ ಮುಗಿಯಲಿವೆ. ಚಂದಾದಾರರು ಸಹಾನುಭೂತಿಯಿಂದ ಹಣವನ್ನು ಮನಿಯಾರ್ಡರು ಮೂಲಕ ಕಳುಹಿಸಿ ಕೊಡಬೇಕೆಂದು ಕೋರುತ್ತೇವೆ. ಚಂದಾದಾರರು ದಯವಿಟ್ಟು ಮನಿಯಾರ್ಡರು ಕೂಪನಿನಲ್ಲಿ ತಮ್ಮ ಚಂದಾ ಸಂಖ್ಯೆಯನ್ನು ನಮೂದಿಸಬೇಕು.

29, 46, 67, 99, 140, 144, 180, 186, 200, 322, 340, 355, 630, 632, 633, 635, 637, 638, 640, 655, 657, 1100, 1158 to 1165, 1168 to 1172, 1174 to 1193, 1195 to 1206, 1209, 1210, 1211, 1223, 1224, 1304.

ಚಂದಾ ಹಣವನ್ನು ಎಮ್. ಓ. ಮೂಲಕ ಕೆಳಗಿನ ವಿಳಾಸಕ್ಕೆ ಕಳುಹಿಸಬೇಕು. ಚೆಕ್ಕುಗಳನ್ನು ಕಳುಹಿಸಿದ್ದಲ್ಲಿ, ಅಥವಾ ವಿಳಾಸ ತಪ್ಪಿದಲ್ಲಿ, ಆಗುವ ಆಲಸ್ಯಕ್ಕೆ ಯಾವ ವಿಧದಲ್ಲೂ ಈ ಕಾರ್ಯಾಲಯ ಬಾಧ್ಯತೆ ವಹಿಸಲಾರದು. ಚಂದಾದಾರರೆಲ್ಲರೂ ಸಹೃದಯತೆಯಿಂದ ಚಂದಾ ಕಳುಹಿಸಬೇಕೆಂದು ವಿನಂತಿ. ಮಿಕ್ಕ ವಿವರಗಳಿಗೆ :

ವೆಲ್‌ಫೇರ್ ಆಫೀಸರ್,
ಸೇಲ್ಸ್ ವಿಂಗ್,
ತಿ. ತಿ. ದೇ. ಪ್ರೆಸ್ ಕಾಂಪೌಂಡ್
**ತಿರುಪತಿ.**